ಆಗಸ್ಟ್ 2019

## ಲೇಖನಗಳು




**ವಿನ್ಯಾಸ**
ಶಂಕರಪ್ಪ ಕೆ. ಪಿ.

**ಮುಖಪುಟ ಛಾಯಾಚಿತ್ರ**
ಶ್ರೀನಿವಾಸ್ ಕೆ. ಎಸ್.

**ಪರಿಷ್ಕರಣೆ**
ಮುರಳಿ ಎಸ್.
ಅನನ್ಯರೂಪ

**ಕರಡು ತಿದ್ದುಪಡಿ**
ಡಾ.ದೀಪಕ್ ಬಿ., ಮೈಸೂರು




# ಕಗ್ಗಲಿ

**ಸಾಮಾನ್ಯ ಹೆಸರು: Black Cutch tree**

**ವೈಜ್ಞಾನಿಕ ಹೆಸರು: *Acacia Catechu***



© ನಾಗೇಶ್ ಓ . ಎಸ್.

ಕಗ್ಗಲಿ ಹೂ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಕಗ್ಗಲಿ ಮರ ಹಿಮಾಲಯದ ಬುಡದಿಂದ ದಕ್ಷಿಣ ಭಾರತದಾದ್ಯಂತ ಬೆಳೆಯುತ್ತದೆ. ಈ ಮರವು ಎಲೆ ಉದುರುವ ಶುಷ್ಕ ಕಾಡುಗಳಂತಹ ಗಿರ್ ವನ್ಯಜೀವಿ ಅಭಯಾರಣ್ಯ, ಕಾರ್ಬೆಟ್ ರಾಷ್ಟ್ರೀಯ ಉದ್ಯಾನ, ರಣಥಂಬೋರ್ ರಾಷ್ಟ್ರೀಯ ಉದ್ಯಾನವನ ಮತ್ತು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿ ವ್ಯಾಪಕವಾಗಿ ಬೆಳೆದಿರುವುದು ಕಾಣುತ್ತದೆ. ಮ್ಯಾನ್ಮಾರ್, ಥೈಲ್ಯಾಂಡ್ ಮತ್ತು ದಕ್ಷಿಣ ಚೀನಾಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಈ ಮರವು ಸುಮಾರು 15 ಮೀಟರ್ ಎತ್ತರದವರೆಗೂ ಬೆಳೆಯುತ್ತದೆ. ಇದರ ತೊಗಟೆ ಗಾಢ ಬೂದು ಬಣ್ಣ ಹೊಂದಿದ್ದು, ತೊಗಟೆಯ ಮೇಲಿನ ಪದರವು ಉದ್ದಕ್ಕೆ ಪಟ್ಟೆಯಂತೆ ಕಳಚಿಕೊಳ್ಳುತ್ತದೆ. ಚಿಗುರಿದ ಕೊಂಬೆಗಳ ಮೇಲೆ ಬಾಗಿದ ಮುಳ್ಳುಗಳನ್ನು ಹೊಂದಿದ್ದು, ಪ್ರತಿಯೊಂದು ಎಲೆಗಳ ಗುಚ್ಚದಲ್ಲೂ 30-50 ಜೋಡಿಯ ಸಣ್ಣ ಹಸಿರು ಎಲೆಗಳನ್ನು ಕಾಣಬಹುದು, ಎಲೆಯ ಮೊಂಡಾದ ತುದಿ; ಎಲೆಗಳ ಅಂಚಿನಲ್ಲಿ ನಯವಾದ ಕೂದಲಿರುತ್ತವೆ. ಜುಲೈ-ಆಗಸ್ಟ್ ತಿಂಗಳುಗಳಲ್ಲಿ ಸಣ್ಣ ಕೆನೆ ಬಿಳಿಯ ಬಣ್ಣದ ಸಿಲಿಂಡರಾಕಾರದ ಉದ್ದನೆಯ ಹೂ ಗುಚ್ಚ ರೂಪುಗೊಂಡಿರುತ್ತವೆ. ಬ್ರಷ್ ತರಹದ ಹೂಗಳ ತುದಿಯಲ್ಲಿ ಸಣ್ಣ ಸಣ್ಣ ತಿಳು ಹಳದಿಯ ಕೇಸರಗಳು ಮೂಡಿರುತ್ತವೆ. ಇದರ ಕಾಯಿಗಳು ಸುಮಾರು 10 ಸೆಂ.ಮೀ ಉದ್ದವಾಗಿದ್ದು, ತೆಳು ಹಾಗು ಚಪ್ಪಟೆಯಾಗಿದೆ. ಇದರ ಕಾಯಿಗಳು ಕಳಿತಾಗ ಕಂದು ಬಣ್ಣಕ್ಕೆ ತಿರುಗುತ್ತವೆ. ಒಳಗೆ ಬೀಜಗಳು ಚಪ್ಪಟೆಯಾದ ತಿಳಿ ಪಾಚಿ ಬಣ್ಣದಲ್ಲಿರುತ್ತವೆ. ಈ ಮರವು ಒಂದು ಮೂಲಿಕೆಯ ಮರ, ಅದರ ಎಲೆ, ಚಿಗುರು ಮತ್ತು ಕಾಂಡಗಳನ್ನು ಔಷಧಿಯಲ್ಲಿ ಬಳಸಲಾಗುತ್ತದೆ. ಹೊಟ್ಟೆಯ ಸಮಸ್ಯೆಗಳಾದ ಅತಿಸಾರ ಮತ್ತು ಅಜೀರ್ಣಕ್ಕೆ ಸಾಮಾನ್ಯವಾಗಿ ಬಳಸಲಾಗುತ್ತದೆ. ಈ ಮರದ ಸುಗಂಧವನ್ನು ಆಹಾರ ಮತ್ತು ಪಾನೀಯಗಳ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಸಂಶೋಧನೆಗಳ ಪ್ರಕಾರ ಈ ಮರದ ಭಾಗಗಳು ಉರಿಯೂತವನ್ನು ಕಡಿಮೆ ಮಾಡುವ ಮತ್ತು ಬ್ಯಾಕ್ಟೀರಿಯಾವನ್ನು ಕೊಲ್ಲುವಂತಹ ರಾಸಾಯನಿಕಗಳನ್ನು ಹೊಂದಿರಬಹುದು ಎಂದು ಭಾವಿಸಲಾಗಿದೆ.



© ಶ್ರೀನಿವಾಸ್ ಕೆ. ಎಸ್.

# ಹುಲಿಗಳ ಅಂತ್ಯದಲ್ಲಿ ಮನುಷ್ಯ?

ಯಾವುದೇ ಅರಣ್ಯ ಪ್ರದೇಶದಲ್ಲಿ ಹುಲಿಗಳು ಕಂಡು ಬಂದರೆ, ಆ ಕಾಡಿಗೆ ಕಾಡೇ ಸಮೃದ್ಧಿಯಿಂದ ಇದೆ ಎಂದು ಅರ್ಥ ಮತ್ತು ನೈಸರ್ಗಿಕ ಸಂಪನ್ಮೂಲಗಳಿಂದ ಶ್ರೀಮಂತಗೊಂಡಿದೆ ಎಂದು ಅರ್ಥ. ಅದು ಹೇಗೆ ಹುಲಿಗಳಿಗೂ ಹಾಗೂ ನೈಸರ್ಗಿಕ ಸಂಪನ್ಮೂಲಗಳಿಗೂ ಸಂಬಂಧ ಎಂದು ನಿಮಗೆ ಆಶ್ಚರ್ಯವಾಗುತ್ತಿರಬೇಕು... ಮುಂದೆ ನೋಡೋಣ, ಏನಾದರು ಸಂಬಂಧವಿದೆಯ ಎಂದು?

ನಮಗೆ ತಿಳಿದಿರುವ ಹಾಗೆ ಹುಲಿಗಳ ಸಂಖ್ಯೆ ದಿನೇ ದಿನೇ ಕ್ಷೀಣಿಸುತ್ತಿದೆ. ಮುಂದಿನ ದಿನಗಳಲ್ಲಿ ಭಾರತದಲ್ಲಿ ಹುಲಿ ಎಂಬ ಧೀಮಂತ ಪ್ರಾಣಿ ಇತ್ತು ಎಂದು ಛಾಯಾಚಿತ್ರಗಳ ಮೂಲಕ ಮುಂದಿನ ಪೀಳಿಗೆಗೆ ತೋರಿಸಬೇಕಾದ ಸಂದರ್ಭ ಎದುರಾಗಲೂಬಹುದು. ಈ ದುರ್ದೈವ ನಮ್ಮ ದೇಶದಲ್ಲಿ ಎಂದೂ ಬರಬಾರದು ಎಂಬುದು ನಮ್ಮೆಲ್ಲರ ಆಸೆ ಅಲ್ಲವೇ? ಇದಕ್ಕೋಸ್ಕರ ನಮ್ಮ ಅರಣ್ಯ ಇಲಾಖೆ ಕೈಗೊಂಡಿರುವ ಕ್ರಮಗಳನ್ನು ನಾವು ಮೆಚ್ಚಲೇಬೇಕು. ಇವರ ಶ್ರಮದಿಂದ ಪ್ರಪಂಚದ 70% ರಷ್ಟು ಹುಲಿಗಳ ಸಂಖ್ಯೆಯನ್ನು ಹೊಂದಿರುವ ಹೆಗ್ಗಳಿಕೆ ನಮ್ಮ ದೇಶದ್ದಾಗಿದೆ. ನಮ್ಮ ಭಾರತ ಸರ್ಕಾರ ಏಪ್ರಿಲ್ 1973 ರಲ್ಲಿ ಪ್ರಾಜೆಕ್ಟ್ ಟೈಗರ್ ಎಂಬ ಕಾರ್ಯಕ್ರಮವನ್ನು ಜಾರಿಗೊಳಿಸಿತು.

ಇದರ ನೇತೃತ್ವದಲ್ಲಿ 50 ಅರಣ್ಯ ಪ್ರದೇಶಗಳನ್ನು ಹುಲಿ ಸಂರಕ್ಷಿತ ಪ್ರದೇಶವೆಂದು ಘೋಷಿಸಿತು. ಇದರ ಪರಿಣಾಮದಿಂದ 2008 ರಲ್ಲಿ 1411 ರಷ್ಟಿದ್ದ ಹುಲಿಗಳ ಸಂಖ್ಯೆ 2010 ರಷ್ಟರಲ್ಲಿ 1706 ಕ್ಕೆ ಜಿಗಿಯಿತು. 2014 ರ ಹುಲಿಗಳ ಗಣತಿ ಪ್ರಕಾರ ಅಂದಾಜು 2226 ಹುಲಿಗಳು ನಮ್ಮ ದೇಶದಲ್ಲಿ ಇವೆ ಎಂದು ವರದಿಯಾಗಿದೆ. ಪ್ರಾಜೆಕ್ಟ್ ಟೈಗರ್ ಪ್ರಕಾರ, ಹುಲಿಗಳ ಸಂಖ್ಯೆ ಕಡಿಮೆಯಾಗಲು ಮುಖ್ಯ ಕಾರಣ ಅವುಗಳ ವಾಸಸ್ಥಾನ ಛಿದ್ರವಾಗುತ್ತಿರುವುದು ಹಾಗೂ ನಾಶವಾಗುತ್ತಿರುವುದು. ಯಾವುದೇ ಗಂಡು ಹುಲಿ ವಾಸಿಸಲು ಅದಕ್ಕೆ ಸುಮಾರು 60-100 ಚದರ ಕಿ. ಮೀ. ರಷ್ಟು ಪ್ರದೇಶ ಹಾಗೂ ಹೆಣ್ಣು ಹುಲಿಗೆ 20 ಚದರ ಕಿ. ಮೀ. ರಷ್ಟು ಪ್ರದೇಶ ಬೇಕಾಗುತ್ತದೆ. ಈ ಪ್ರದೇಶದಲ್ಲೇ ಹುಲಿಯು ಬೇಟೆಯಾಡಬೇಕು, ಜನ್ಮ ನೀಡಬೇಕು ಹಾಗು ಮರಿಗಳನ್ನು ಪೋಷಿಸಬೇಕು.



ಹಿಂದಿನ ಕಾಲದಲ್ಲಿ ನಮ್ಮ ದೇಶವನ್ನು ಸಾಮ್ರಾಜ್ಯಗಳಾಗಿ ವಿಂಗಡಿಸಿ, ಆ ಸಾಮ್ರಾಜ್ಯಗಳಲ್ಲಿ ರಾಜರು ಆಳ್ವಿಕೆ ನಡೆಸುತ್ತಿದ್ದರು. ರಾಜರು ಅವರ ಪರಾಕ್ರಮ ತೋರಿಸಲು ಹಾಗೂ ಅವರ ಸಾಮ್ರಾಜ್ಯವನ್ನು ವಿಸ್ತರಿಸಿಲು ಬೇರೆ ರಾಜರ ಮೇಲೆ ದಂಡೆತ್ತಿ ಹೋಗುತ್ತಿದ್ದರು ಮತ್ತೆ ಯುದ್ಧ ಮಾಡುತ್ತಿದ್ದರು. ಆ ಯುದ್ಧದಲ್ಲಿ ಇಬ್ಬರು ತಮ್ಮ ಪರಾಕ್ರಮಗಳನ್ನು ತೋರಿಸುತ್ತ, ಕಾದಾಡುತ್ತಿದ್ದರು. ಕೊನೆಯವರೆಗೂ ಯಾರು ಕಾದಾಡುತ್ತಿದ್ದರೋ, ಆ ಯುದ್ಧದಲ್ಲಿ ಅವರು ಜಯಶೀಲರಾಗುತ್ತಿದ್ದರು. ಪಾಪ ಸೋತ ರಾಜ ಗೆದ್ದ ರಾಜನಿಗೆ ತನ್ನ ರಾಜ್ಯವನ್ನು ಬಿಟ್ಟುಕೊಡಬೇಕಿತ್ತು. ಇನ್ನು ರಾಜಕುಮಾರಿಯ ಮದುವೆ ಎಂದರೆ ಹುಡುಗಾಟದ ವಿಷಯವೇನು? ರಾಜಕುಮಾರಿಯನ್ನು ವರಿಸಲು, ಹಲವು ರಾಜ್ಯಗಳಿಂದ ರಾಜಕುಮಾರರು ಬಂದು ತಮ್ಮ ಪರಾಕ್ರಮಗಳನ್ನು ಪ್ರದರ್ಶಿಸುತ್ತಿದ್ದರು. ರಾಜಕುಮಾರಿಗೆ ಯಾರ ಪರಾಕ್ರಮ ಇಷ್ಟವಾಗುತ್ತಿತ್ತೋ, ಆ ರಾಜಕುಮಾರನನ್ನು ಮದುವೆಯಾಗುತ್ತಿದ್ದಳು. ಇದೇನಪ್ಪ ಹುಲಿ ಬಗ್ಗೆ ಹೇಳ್ತ ಇದ್ದಾರಾ ಇವರು? ಎಂದು ಕೆಲವರಿಗೆ ಸಂಶಯ ಉಂಟಾಗಬಹುದು. ಇನ್ನೂ ಮುಂದೆ ಈ ಲೇಖನವನ್ನು ಓದಿದರೆ ನಿಮ್ಮ ಸಂಶಯ ದೂರವಾಗುತ್ತದೆ.




ಹುಲಿಗಳು ಯಾವಾಗಲೂ ಒಂಟಿಯಾಗಿ ಜೀವನ ಕಳೆಯುತ್ತವೆ. ರಾಜರಿಗೆ ಹೇಗೆ ಸಾಮ್ರಾಜ್ಯವಿರುತ್ತದೋ ಹಾಗೇ ಹುಲಿಗಳಿಗೆ ಅವುಗಳದ್ದೇ ಆದ ಸಾಮ್ರಾಜ್ಯವಿರುತ್ತದೆ, ಅದನ್ನು ನಾವು ಹುಲಿಗಳ ಪ್ರಾಂತ್ಯ (Territory) ಎಂದು ಕರೆಯುತ್ತೇವೆ. ಆ ಪ್ರದೇಶದ ವಿಸ್ತೀರ್ಣ ನಿಮಗೆ ಮೊದಲೇ ಹೇಳಿದ್ದೇನೆ. ಹೆಣ್ಣು ಹುಲಿ ಸಾಮಾನ್ಯವಾಗಿ ಯಾವ ಪ್ರದೇಶದಲ್ಲಿ ಹುಟ್ಟಿರುತ್ತದೋ, ಆ ಸ್ಥಳವನ್ನೇ ತನ್ನ ಪ್ರದೇಶವನ್ನಾಗಿ ಮಾಡಿಕೊಳ್ಳುತ್ತದೆ. ಆದರೆ ಗಂಡು ಹುಲಿ ಮಾತ್ರ ತಾನು ಬೆಳೆದ ಜಾಗವನ್ನು ತನ್ನ ಪ್ರದೇಶವನ್ನಾಗಿ ಮಾಡಿಕೊಳ್ಳಬಹುದು, ಅಥವಾ ಯಾವ ಹುಲಿಯೂ ಆವರಿಸಿಕೊಳ್ಳದ ಜಾಗವನ್ನು ಅಥವಾ ಇನ್ನೊಂದು ಗಂಡು ಹುಲಿಗೆ ಸವಾಲನ್ನು ಒಡ್ಡಿ, ಆ ಸವಾಲಿನಲ್ಲಿ ಗೆದ್ದು, ಅದರ ಜಾಗವನ್ನು ತನ್ನ ಪ್ರಾಂತ್ಯವನ್ನಾಗಿ ಮಾಡಿಕೊಳ್ಳಬಹುದು. ಹುಲಿಗಳು ತಮ್ಮ ಪ್ರಾಂತ್ಯವನ್ನು ವಾಸನೆಯಿಂದ ಗುರುತು ಮಾಡುತ್ತವೆ. ಈ ವಾಸನೆ ದೀರ್ಘಾವಧಿಕಾಲ ಹಾಗೇ ಉಳಿದಿರಬೇಕಲ್ಲ. ಅದಕ್ಕೆ ಈ ಹುಲಿಗಳು ಮರ, ಕಲ್ಲು ಮುಂತಾದವುಗಳ ಮೇಲೆ ಮೂತ್ರ ವಿಸರ್ಜನೆ ಮಾಡುವ ಮುಖಾಂತರ ಗುರುತು ಮಾಡುತ್ತವೆ ಹಾಗೂ ಮರಗಳ ಮೇಲೆ ಇದು ತನ್ನ ಪ್ರಾಂತ್ಯವೆಂದು ತನ್ನ ಉಗುರಿನಿಂದ ಗುರುತು ಮಾಡಿರುತ್ತವೆ. ಆ ಪ್ರಾಂತ್ಯದಲ್ಲಿಯೇ ಅದರ ಬೇಟೆ ಎಲ್ಲವೂ ಆಗಬೇಕಾಗುತ್ತದೆ. ಬೇರೆ ಹುಲಿ ತನ್ನ ಪ್ರಾಂತ್ಯಕ್ಕೆ ಬಂದಿದೆ ಎಂದು, ಆ ಪ್ರದೇಶದ ಹುಲಿಗೆ ವಾಸನೆಯಿಂದ ಸುಲಭವಾಗಿ ಗೊತ್ತಾಗುತ್ತದೆ.

ಯಾವಾಗ ಬೇರೆ ಹುಲಿ ತನ್ನ ಪ್ರಾಂತ್ಯಕ್ಕೆ ಬಂದಿದೆ ಎಂದು ತಿಳಿಯುತ್ತದೋ, ಕಾದಾಡಲು ಸಿದ್ಧವಾಗುತ್ತದೆ. ಆ ಪ್ರಾಂತ್ಯಕ್ಕೋಸ್ಕರ ಎರಡು ಹುಲಿಗಳು ಕಾದಾಡುತ್ತವೆ. ಆ ಕಾದಾಟ ಹೇಗಿರುತ್ತದೆ ಎಂದರೆ ಅದರಲ್ಲಿ ಒಂದು ಹುಲಿ ಸಾಯಲೂಬಹುದು. ಬದುಕಿರೋ ಹುಲಿ ಆ ಪ್ರಾಂತ್ಯದ ರಾಜನಾಗುತ್ತಾನೆ. ಇನ್ನೂ ಹೆಣ್ಣು ಹುಲಿ ಗಂಡು ಹುಲಿಯನ್ನು ವರಿಸಬೇಕಾದರೆ, ಅದರ ಪರಾಕ್ರಮವನ್ನು ನೋಡಿ ನಿಶ್ಚಯಿಸುತ್ತದೆ. ಯಾಕೆಂದರೆ ಯಾವಾಗ ಬೇಕಾದರು ಬೇರೆ ಹುಲಿಗಳ ಜೊತೆ ಘರ್ಷಣೆ ಉಂಟಾಗಬಹುದು. ಅದಕ್ಕೆ ಹೆಣ್ಣು ಹುಲಿ ತನ್ನ ಕಂದಮ್ಮಗಳ ಆಹಾರ ಹಾಗೂ ಸುರಕ್ಷತೆಯನ್ನು ಕುರಿತು ಯೋಚಿಸಿ ಗಂಡು ಹುಲಿಯನ್ನು ನಿಶ್ಚಯಿಸುತ್ತದೆ. ಹುಲಿಗಳ ಶೈಲಿ ಹಾಗೂ ಹಿಂದಿನ ರಾಜರ ಜೀವನ ಶೈಲಿ ಬಹುಮಟ್ಟಿಗೆ ಒಂದೇ ರೀತಿ ಇದ್ದುದ್ದರಿಂದ, ರಾಜರ ಜೀವನ ಶೈಲಿಯನ್ನು ಮೊದಲು ಹೇಳಬೇಕಿತ್ತು. ಮನುಷ್ಯ ಯಾವಾಗಲು ಪ್ರಕೃತಿಯನ್ನು ಅನುಕರಿಸುತ್ತಾನೆ ಎನ್ನುವ ಮಾತಿನಲ್ಲಿ ಸಂದೇಹವಿಲ್ಲ ನೋಡಿ.




ಹುಲಿಗಳು ತಮ್ಮ ಪ್ರಾಂತ್ಯವನ್ನು ಅಲ್ಲಿ ಸಿಗುವ ನೀರು ಹಾಗೂ ಬೇಟೆಯಾಡಲು ಸಿಗುವ ಪ್ರಾಣಿಗಳ ಮೇಲೆ ಆಯ್ಕೆ ಮಾಡಿಕೊಳ್ಳುತ್ತವೆ. ಯಾವುದೇ ಪ್ರಾಣಿ ಬದುಕಲು ಆ ಪ್ರದೇಶದಲ್ಲಿನ ನೈಸರ್ಗಿಕ ಸಂಪನ್ಮೂಲಗಳ ಕೊರತೆ ಇರಬಾರದು. ಎಲ್ಲಿ ನೈಸರ್ಗಿಕ ಸಂಪನ್ಮೂಲಗಳು ಚೆನ್ನಾಗಿ ಸಿಗುತ್ತವೋ, ಅಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಣಿಗಳು ಕಂಡು ಬರುತ್ತವೆ. ಹೆಚ್ಚಾಗಿ ಪ್ರಾಣಿಗಳು ಕಂಡು ಬಂದರೆ, ಹುಲಿಗೆ ಬೇಟೆಯಾಡಲು ಹೆಚ್ಚಾಗಿ ಆಯ್ಕೆಗಳು ದೊರೆಯುತ್ತವೆ. ಆ ಪ್ರದೇಶದಲ್ಲಿ ಸಸ್ಯಹಾರಿ ಪ್ರಾಣಿಗಳು ಹೆಚ್ಚಾಗಿ ಸಿಗುತ್ತಿವೆ ಎಂದರೆ, ಆ ಅರಣ್ಯ ಪ್ರದೇಶದಲ್ಲಿ

ನೈಸರ್ಗಿಕ ಸಂಪನ್ಮೂಲಗಳಿಂದ ಕೂಡಿದೆ ಎಂದು ಅರ್ಥ. ಈಗ ಹುಲಿಗಳ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಮಧ್ಯೆ ಹೇಗೆ ಸಂಬಂಧ ಇದೆ ಎಂದು ನಿಮಗೆ ಅರ್ಥವಾಯಿತು ಎಂದುಕೊಂಡಿದ್ದೇನೆ.

ಆದರೆ ನಾವು ಈ ನೈಸರ್ಗಿಕ ಸಂಪನ್ಮೂಲಗಳನ್ನು ಹಾಗೂ ಹುಲಿಗಳ ಆವಾಸಗಳಾದ ಕಾಡುಗಳನ್ನು ಒತ್ತುವರಿ ಮಾಡುವುದರಿಂದ ಮತ್ತು ಇಂತಹ ಕಾಡುಗಳಲ್ಲಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅರಣ್ಯಗಳಿಗೆ ತೊಂದರೆಯಾಗುವ ಚಟುವಟಿಕೆಗಳನ್ನು ಮನುಷ್ಯ ಮಾಡಿದರೆ ಅಳಿವಿನಂಚಿನಲ್ಲಿರುವ ಹುಲಿ ಮತ್ತು ಇತರ ಪ್ರಾಣಿಗಳಿಗೆ ತೊಂದರೆಯಂತು ಕಟ್ಟಿಟ್ಟ ಬುತ್ತಿ. ಇಂತಹ ಪ್ರದೇಶಗಳಲ್ಲಿ ಯಾವಾಗ ನೈಸರ್ಗಿಕ ಸಂಪನ್ಮೂಲಗಳ ಕೊರತೆ



ಎದುರಾಗುತ್ತದೋ, ಸಸ್ಯಾಹಾರಿ ಪ್ರಾಣಿಗಳ ಸಂಕುಲ ಕಡಿಮೆಯಾಗುತ್ತದೆ. ಇದರಿಂದ ಹುಲಿಗಳಿಗೆ ಬೇಟೆಯಾಡಲು ಪ್ರಾಣಿಗಳು ದೊರಕದೆ, ಬೇರೆ ಹುಲಿಗಳ ಜೊತೆ ಪ್ರಾಂತ್ಯಕ್ಕಾಗಿ ಕಾದಾಟಕ್ಕೆ ನಿಲ್ಲುತ್ತವೆ. ಈ ಕಾದಾಟದ ಪರಿಣಾಮದಿಂದ ಒಂದು ಹುಲಿ ತನ್ನ ಆವಾಸವನ್ನು ಕಳೆದುಕೊಳ್ಳುತ್ತದೆ ಹಾಗು ಮತ್ತೊಂದು ಆವಾಸಕ್ಕಾಗಿ ಹುಡುಕಾಟ ನಡೆಸುತ್ತದೆ. ದೊರಕಿದರೆ ಸರಿ ಇಲ್ಲವಾದರೆ ಗಡಿಭಾಗದಲ್ಲಿರುವ ಹಳ್ಳಿಗಳಲ್ಲಿ ಸಿಗುವ ದನ ಕುರಿ ನಾಯಿಗಳು ಹುಲಿಗಳಿಗೆ ಸುಲಭ ತುತ್ತಾಗುತ್ತವೆ, ಅವುಗಳ ರಕ್ಷಣೆಗೆ ಮಾನವ ನಿಲ್ಲುತ್ತಾನೆ. ಆಕ್ರಮಣಕಾರಿಯಾದ ಹುಲಿಗಳಿಗೆ ಮಾನವ ನಿಸ್ಸಹಾಯಕ ಎಂದು ಬಲುಬೇಗ ತಿಳಿಯುತ್ತದೆ ಹಸಿವಿನಿಂದ ಅವು ನರಭಕ್ಷಕಗಳಾಗಿ ಮಾರ್ಪಡುತ್ತವೆ. ಮಾನವ ಅವುಗಳನ್ನು ನರಭಕ್ಷಕ ಎಂದು ಕೊಲ್ಲುತ್ತಾನೆ. ಇವುಗಳೆಲ್ಲದರ ಪರಿಣಾಮದಿಂದ ಹುಲಿಗಳ ಸಂಖ್ಯೆ ಕಡಿಮೆಯಾಗುತ್ತವೆ.

ಒಂದು ಅರಣ್ಯ ಪ್ರದೇಶದ ನಾಶದಿಂದ, ಹುಲಿಗಳ ಸಂಖ್ಯೆಯ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂದು ಅರ್ಥವಾಗುತ್ತಿದೆ. ಎಲ್ಲ ಪ್ರಾಣಿಗಳು ಆಹಾರ ಸರಪಳಿಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಯಾವುದೇ ಪ್ರಾಣಿ ನಾಶವಾದರು ಆಹಾರ ಸರಪಳಿಯಲ್ಲಿ ಅಲ್ಲೋಲ ಕಲ್ಲೋಲವಾಗುತ್ತದೆ. ಆದ್ದರಿಂದ ನಾವು ಈಗಿರುವ ಅರಣ್ಯಪ್ರದೇಶಗಳನ್ನು ನಾಶಮಾಡದೇ ಎಲ್ಲ ಪ್ರಾಣಿ ಸಂಕುಲಗಳಿಗೂ ಬದುಕಲು ಬಿಡೋಣ...

- ಅಶ್ವಿನಿ ಎಸ್.
ಬೆಂಗಳೂರು.





# ರೋಜಿ ಮತ್ತು ಹಾವುಗಳು.

ಈ ವರ್ಷ ನಿಜವಾಗಿಯೂ ಮುಂಗಾರು ಮಳೆ ತಡವಾಗಿದೆ. ಅಲ್ಲಲ್ಲಿ ಚದುರಿದ ಮೋಡಗಳು ಆಕಾಶದಲ್ಲಿ ರೊಯ್ಯನೆ ಚಲಿಸುತ್ತಿವೆಯಾದರೂ, ಮಳೆ ಮಾತ್ರ ಬರುತ್ತಿಲ್ಲ. ಕಳೆದ ವರ್ಷ ಇಷ್ಟೊತ್ತಿಗೆ ಒಳ್ಳೆ ಮಳೆಯಾಗಿ ಬಿತ್ತನೆ ಕಾರ್ಯಕ್ಕೆ ತಯಾರಾಗಿದ್ದೆ. ಬಿತ್ತಿದ ಮೇಲೆ ರಾಗಿಯ ಫಸಲೂ ಚೆನ್ನಾಗಿ ಬಂದಿತ್ತು. ಹಾಗಿದ್ದ ರಾಗಿಯನ್ನೆಲ್ಲಾ ಚೀಲಗಳಿಗೆ ತುಂಬಿಸಿ ಮೂಟೆ ಮಾಡಿ ಒಂದರ ಮೇಲೆ ಒಂದರಂತೆ ಸ್ಟೋರ್ ರೂಮಿನಲ್ಲಿ ಜೋಡಿಸಿ ಬಂದೋಬಸ್ತ್ ಮಾಡಿ ಮಡಗಿದ್ದೆ.

ಮನೆಯ ಸುತ್ತಲೂ ಇರುವ ಬಯಲು ಇಲಿಗಳಿಗೆ ನಮ್ಮ ರಾಗಿ ಮೂಟೆಗಳ ಸುಳಿವು ಸಿಕ್ಕು, ಸ್ಟೋರ್ ರೂಮಿನ ಗೋಡೆಗೆ ತೂತು ಕೊರೆದು ದಾಳಿ ಇಟ್ಟಿದ್ದವು. ರಾತ್ರಿ ವೇಳೆ ರಾಗಿ ಮೂಟೆಗಳನ್ನೆಲ್ಲಾ ತೂತು ಕೊರೆದು ಚಂದಾಗಿ ತಿಂದು ಅಲ್ಲೇ ಹಿಕ್ಕೆ ಹಾಕಿ ಹೋಗಿದ್ದವು. ‘ರೈತರಿಗೆ ಇರುವಷ್ಟು ಚಿಂತೆ ದೇಶವಾಳುವ ದೊರೆಗೂ ಇರದು’. ಮಳೆ ಬಂದರೆ ಬೀಜ-ಗೊಬ್ಬರ ಹೊಂದಿಸುವ ಚಿಂತೆ, ಬೆಳೆ ಬಂದರೆ ಅದಕ್ಕೆ ಒಳ್ಳೆ ಬೆಲೆ ಇಲ್ಲ ಎಂಬ ಚಿಂತೆ. ನನಗೆ ದಿನ ರಾತ್ರಿ ರಾಗಿ ಮೂಟೆಗೆ ಕನ್ನ ಹಾಕುತ್ತಿದ್ದ ಇಲಿಗಳ ಚಿಂತೆ. ಇವುಗಳಿಗೆ ಸರಿಯಾಗಿ ಬುದ್ಧಿ ಕಲಿಸಬೇಕೆಂದು ಗುಡ್ಡಯ್ಯನದೊಡ್ಡಿಯಿಂದ ಒಂದು ಬೆಕ್ಕಿನ ಮರಿ ತರಿಸಿದೆ. ಬೆಳ್ಳಗೆ ಕೆಂಚಗೆ ಇದ್ದ ಈ ಮುದ್ದು ಬೆಕ್ಕಿಗೆ ರೋಜಿ ಎಂದು ನಾಮಕರಣ ಮಾಡಿದೆ. ಬಟ್ಟಲಲ್ಲಿ ಹಾಲಿಟ್ಟು ಸ್ಟೋರ್ ರೂಮಿನಲ್ಲಿ ಬಿಟ್ಟೆ. ಈ ಸಣ್ಣ ಬೆಕ್ಕಿಗೆ ಆ ಇಲಿಗಳು ಕ್ಯಾರೇ ಎನ್ನದೆ ತಮ್ಮ ಕೆಲಸವನ್ನು ಮುಂದುವರಿಸಿದ್ದವು. ಈ ಬೆಕ್ಕುಮರಿ ಮಾತ್ರ ಹಾಲು-ಅನ್ನ ತಿಂದು, ರಾಗಿಯ ಚೀಲದ ಮೇಲೆ ಮಲಗಿ ಗಡದ್ದು ನಿದ್ದೆ ಮಾಡುತ್ತಿತ್ತು.

ಈ ಬೆಕ್ಕಿಗೆ ಹಾಲು-ಅನ್ನ ಹಾಕದೆ ಉಪವಾಸ ಕೆಡವಿದರೆ, ಹೊಟ್ಟೆ ಹಸಿವಿಗೆ ಇಲಿ ಹಿಡಿದು ತಿನ್ನುತ್ತದೆ ಎಂದೆಣಿಸಿ ಹಾಲು-ಅನ್ನ ಹಾಕುವುದನ್ನು ನಿಲ್ಲಿಸಿದೆ. ಹಸಿದ ರೋಸಿ ಮಿಯಾಂವ್... ಮಿಯಾಂವ್... ಎಂದು ಮನೆಯೆಲ್ಲ ಓಡಾಡಿತು.

ನೀವು ಪಕ್ಷಿ ಪ್ರೇಮಿಗಳಾಗಿದ್ದರೆ ಬೆಕ್ಕನ್ನು ಮಾತ್ರ ಸಾಕಬೇಡಿ. ನಮ್ಮ ಮನೆಯ ಪಡಸಾಲೆಯ ಜಂತಿಯಲ್ಲಿ ಹಲವು ವರ್ಷದಿಂದ ಗುಬ್ಬಚ್ಚಿಗಳು ಗೂಡುಕಟ್ಟಿ ವಾಸವಿದ್ದವು. ಅವು ಮುಂಜಾನೆ ಮನೆಯಂಗಳದಲ್ಲಿ ಚೆಲ್ಲಿದ್ದ ಕಾಳು ತಿನ್ನುತ್ತಿದ್ದವು. ಹಸಿದ ರೋಜಿ ಒಂದೇ ನೆಗೆತಕ್ಕೆ ಹಾರಿ ಕಾಳು ತಿನ್ನುತ್ತಿದ ಗುಬ್ಬಚ್ಚಿಯ ರೆಕ್ಕೆಹಿಡಿದು ಕ್ಷಣಾರ್ಧದಲ್ಲಿ ಹಕ್ಕಿಯ ಪುಕ್ಕ ತರಿದು ತಿಂದುಬಿಟ್ಟಳು. ಈಗ ನಮ್ಮ ಮನೆಯ ಬಳಿ ಹಕ್ಕಿಗಳ ಕಲರವ ಕೇಳಿ ಬಹಳ ದಿನವಾಗಿದೆ. ಮನೆಯಲ್ಲಿದ್ದ ಗುಬ್ಬಚ್ಚಿಗಳನ್ನೆಲ್ಲಾ ಗುಳುಂ ಮಾಡಿದ ಮೇಲೆ ಇಲಿಗಳ ಮೇಲೆ ದಾಳಿ ಇಟ್ಟಿತು. ಮೊದಲೆಲ್ಲಾ ಸಣ್ಣ ಸಣ್ಣ ಇಲಿಗಳನ್ನು ಹಿಡಿದು ಮುಕ್ಕಿತು. ಮನೆಯಲ್ಲಿ ಇದ್ದ ಇಲಿಗಳೆಲ್ಲಾ ಖಾಲಿಯಾದ ಮೇಲೆ ಬಯಲಿನ ಹೆಗ್ಗಣಗಳನ್ನು ಕೊಂದು ತಂದು ರೂಮಿನ ಮಂಚದ ಅಡಿಯಲ್ಲಿ ಹಾಕಿಕೊಂಡು ತಿಂದು, ಉಳಿದ ಇಲಿಯ ಕಳೆಬರ ಅಲ್ಲೇ ಬಿಟ್ಟು ಕೊಠಡಿಯನ್ನೆಲ್ಲಾ ಗಲೀಜು ಮಾಡಿ ಕೊಳೆತ ವಾಸನೆ ಬರುವಂತೆ ಮಾಡಿತು. ಇಲಿಗಳಿಗೆ ಹೆದರಿ ರೋಜಿಯ ಈ ಎಲ್ಲಾ ತಂಟೆಗಳನ್ನು ಸಹಿಸಿಕೊಳ್ಳುಷ್ಟರಲ್ಲಿ ನನಗೆ ಸಾಕುಸಾಕಾಗಿ ಹೋಯ್ತು. ಹೀಗೆ ರೋಜಿ ಬೆಳೆದು ದೊಡ್ಡವಳಾದಳು.

ನಾವು ಓದಿರುವ ಆಹಾರ ಸರಪಳಿಯ ಪ್ರಕಾರ, ಮನೆಯ ಸುತ್ತ-ಮುತ್ತ ಇಲಿಗಳು ಕಡಿಮೆಯಾದರೆ ಅವನ್ನು ತಿಂದು ಬದುಕುವ ಹಾವುಗಳಿಗೆ ಊಟವಿಲ್ಲದೆ ಸತ್ತು, ಅಥವಾ ಆಹಾರವನ್ನು ಅರಸಿ ಬೇರೆಡೆ ವಲಸೆ ಹೋಗಿ, ಹಾವುಗಳ ಸಂಖ್ಯೆಯೂ ಕಡಿಮೆಯಾಗಬೇಕಲ್ಲವೇ? ಆದರೇ ಕಳೆದ ಒಂದೇ ವಾರದಲ್ಲಿ ನಾಲ್ಕು ತರಾವರಿ ಹಾವುಗಳು ಮನೆಯ ಒಳಗೆ, ಬಾಗಿಲಲ್ಲಿ ಕಾಣಿಸಿಕೊಂಡು ದಿಗಿಲಿಕ್ಕಿಸಿವೆ ಎಂದರೆ ನೀವೇ ಊಹಿಸಿಕೊಳ್ಳಿ ನಮ್ಮ ಪಾಡು!.

ಹಿತ್ತಲುಮನೆಯ ಬಚ್ಚಲಿನ ಬಳಿ ನಾಗರ ಹಾವನ್ನು ಕಂಡ ರೋಜಿ ಅದರ ಜೊತೆ ಸರಸವಾಡಿದಳೆಂದೂ, ರೋಜಿ ಹಾವನ್ನು ಹೆದರಿಸಿ ಓಡಿಸಿದಳೆಂದೂ, ಬೆಕ್ಕಿಗೆ ಬೆದರಿ ಹಾವು ಹೆಡೆಮುದುರಿ ಓಟಕಿತ್ತಿತೆಂದೂ, ಮಂಗಳವಾರ ಸಂತೆ ವ್ಯಾಪಾರ ಮುಗಿಸಿ ಬಂದಿದ್ದ ನನಗೆ ಮನೆಯಲ್ಲಿದ್ದವರೆಲ್ಲಾ ತರಾವರಿ ವರದಿಯನ್ನು ಒಪ್ಪಿಸಿದರು. ನಾಗರ ಹಾವಿನಂತಹ ವಿಷಕಾರಿ ಹಾವನ್ನೇ ಎದುರಿಸಿದ ಧೈರ್ಯವಂತ ಬೆಕ್ಕು ನಮ್ಮ ಮನೆಯಲ್ಲಿ ಇರುವುದು ಎಷ್ಟು ಒಳ್ಳೆಯದು



ಎಂದು ಮನೆಯವರೆಲ್ಲರೂ ಅದಕ್ಕೆ ಹಾಲು - ಅನ್ನವನ್ನು ಸ್ವಲ್ಪ ಹೆಚ್ಚಿಗೆ ಕೊಡಲಾರಂಭಿಸಿದರು. ಅನ್ನ ತಿಂದು ಹಾಲು ಕುಡಿದು ಬಚ್ಚಲ ಒಲೆಯ ಬಳಿ ಮುದುಡಿ ಬೆಚ್ಚಗೆ ಮಲಗಿ ಹಾಯಾಗಿ ನಿದ್ರಿಸುವುದೇ ರೋಜಿಯ ದಿನಚರಿಯಾಯ್ತು.

ಇಲಿಗಳು ಮನೆಯಲ್ಲಿ ಕಡಿಮೆಯಾಗಿದ್ದಕ್ಕೆ ಅವುಗಳನ್ನು ಹುಡುಕಿಕೊಂಡೇನಾದರೂ ಹಾವುಗಳು ಬಂದವಾ? ಎಂದು ನನಗೇನೋ ಅನುಮಾನ!. ಬೆಳಿಗ್ಗೆ ಬಾಗಿಲಿಗೆ ನೀರು ಹಾಕಿ ರಂಗೋಲಿ ಇಡಲು ಬಾಗಿಲು ತೆಗೆದಾಗ ನಿಲುವಿನ ಬಳಿ ಹಾವನ್ನು ಕಂಡು "ಅಯ್ಯಪ್ಪಾ... ಹಾವು ಹಾವು... ಎಂದು ಚೀರಿದಳು ಹೆಂಡತಿ! ಬಂದು ನೋಡಿದರೆ ಹಸಿರು ಬೆನ್ನೇಣು ಹಾವು (ಗ್ರೀನ್ ಕೀಲ್ ಬ್ಯಾಕ್ )! ಚಕ್ಕುಲಿಯಂತೆ ತೆಕ್ಕೆ ಹಾಕಿ ಮಲಗಿತ್ತು.

ಗೆಳೆಯ ಪವನ್ ಜೊತೆ ಅಲೆಮಾರಿಯ ತರಹ ಕಾಡು-ಮೇಡು ತಿರುಗುವ ಕಾಲದಲ್ಲಿ ನನಗೆ ಯಾವ ಹಾವು ವಿಷಕಾರಿ ಹಾಗೂ ಯಾವ ಹಾವು ವಿಷಕಾರಿಯಲ್ಲ ಎಂದು ಗುರುತಿಸುವುದನ್ನು ತಿಳಿಸಿದ್ದ. ಭಾರಿ ವಿಷವೇನೂ ಇಲ್ಲದ, ಬರೀ ಕಪ್ಪೆಯನ್ನು ಮಾತ್ರ ತಿನ್ನುವ ಹಸಿರು ಬೆನ್ನೇಣು ಹಾವು ಮನೆ ಬಾಗಿಲಿಗೆ ಏಕೆ ಬಂತು? ನನ್ನ ಸಣ್ಣ ಮಗಳು ಬೇರೆ ಈ ಬಾಗಿಲ ಬಳಿಯೇ ಆಟವಾಡುತ್ತಾಳೆ. ನಾವು ಇಲ್ಲೇ ಓಡಾಡುತ್ತೇವೆ ಎಂದು ಆತಂಕಗೊಂಡೆ. ಅಲ್ಲೇ ದೂರದಲ್ಲಿ ರೋಜಿ ಕುಳಿತಿದ್ದಳು.

ಭಾರತದ ದಖನ್ ಪ್ರಸ್ಥಭೂಮಿ ಮತ್ತು ಶ್ರೀಲಂಕಾದಲ್ಲಿ ಕಾಣಸಿಗುವ ಈ ಹಸಿರು ಬೆನ್ನೇಣು ಹಾವು, ಹಸಿರು ಬಣ್ಣದ ಸುಂದರ ಹಾವು. ಇದು ಮರಿಯಾಗಿದ್ದಾಗ ಗಾಢ ಎಲೆಹಸಿರು ಬಣ್ಣದಿಂದ ಕೂಡಿದ್ದು ಈ ಜಾತಿಯ ಮರಿ ಹಾವುಗಳ ತಲೆಯ ಮೇಲೆ "A" ಆಕಾರದ ಕಪ್ಪು ಪಟ್ಟೆಗಳ ನಡುವೆ ಹಳದಿ ಬಣ್ಣವಿರುತ್ತದೆ. ಹಾವು ದೊಡ್ಡದಾದ ಮೇಲೆ ಈ ಪಟ್ಟೆಗಳು ಮಾಯವಾಗುತ್ತವೆ. ಎಲೆ ಉದುರುವ ಕಾಡು, ತೆರೆದ ಬಯಲಿನಲ್ಲಿ, ತೋಟಗಳಲ್ಲಿ ಮತ್ತು ಜೌಗು ಪ್ರದೇಶದಲ್ಲಿನ ಪೊದೆಗಳಲ್ಲಿ ಕಂಡು ಬರುವ ಇದು ಸುಮಾರು ಒಂದು ಮೊಳ ಉದ್ದ ಇರುತ್ತದೆ.




ರಾತ್ರಿ ವೇಳೆ ಹೆಚ್ಚು ಕ್ರಿಯಾಶೀಲವಾಗಿರುವ ಹಾವು ಮನೆ ಬಾಗಿಲಿಗೆ ಏಕೆ ಬಂತು ಎಂದು ಯೋಚಿಸುತ್ತಾ ಒಂದು ಉದ್ದ ಕಡ್ಡಿ ತೆಗೆದು ಕೊಂಡು ಹಾವನ್ನು ಎತ್ತಿ ದೂರದ ಬೇಲಿಗೆ ಬಿಸಾಕಿ ಬಂದೆ. ನನ್ನ ಹಿಂದೆಯೇ ರೋಜಿಯೂ ಬಂದಿದ್ದಳು. ಆ ದಿನಪೂರ್ತಿ ಬಾಗಿಲ ಬಳಿ ಬಂದಾಗಲೆಲ್ಲಾ ಹಾವಿನ ನೆನಪಾಗಿ ಏನೋ ಒಂದು ಸಣ್ಣ ಭಯ ಮನೆಮಂದಿಗೆಲ್ಲರಿಗೂ ಜಾಗೃತವಾಗುತ್ತಿತ್ತು. ಮಾರನೇ ರಾತ್ರಿ ಮನೆಯಲ್ಲಿ ಮಲಗಿದ್ದೆ, ಒಂದು ಹೊತ್ತಿನಲ್ಲಿ ಬಾಯಾರಿಕೆ ಯಾಯಿತು. ಎದ್ದು ಅಡುಗೆ ಕೋಣೆಯ ಲೈಟಾಕಿ ನೀರು ಕುಡಿಯುತ್ತಿರಬೇಕಾದರೆ ಗ್ಯಾಸ್ ಸಿಲಿಂಡರಿನ ಬಳಿಯಿಂದ ಏನೋ ಒಂದು ಸಣ್ಣ ಶಬ್ದವಾಯಿತು. ನಾನು ಅದು ಯಾವುದೋ ಇಲಿಯೋ ಜಿರಳೆಯೋ

ಇರಬೇಕೆಂದುಕೊಂಡರೂ ಬೆಳಿಗ್ಗೆಯಿಂದ ಕಂಡ ಹಾವುಗಳೇ ತಲೆಯಲ್ಲಿ ಇದ್ದುದ್ದರಿಂದ ಹಾವೇನಾದರೂ ಅಡುಗೇ ಮನೆಗೂ ಬಂತಾ! ಎಂದು ನೋಡಿದರೆ, ಗ್ಯಾಸ್ ಸಿಲಿಂಡರಿನ ತಳಭಾಗದಲ್ಲಿ ಇರುವ ರಿಂಗಿನಲ್ಲಿನ ಸಣ್ಣ ರಂಧ್ರದಲ್ಲಿ ತಲೆ ಹೊರಗಾಕಿ ದೇಹವನ್ನೆಲ್ಲ ರಿಂಗಿನ ಒಳಗೆ ತೆಕ್ಕೆ ಹಾಕಿ ಕುಳಿತಿದೆ ಹೆಬ್ಬೆಟ್ಟು ಗಾತ್ರದ ಹಾವು. ಸರಿರಾತ್ರಿಯಲ್ಲಿ ಏನು ಮಾಡಲಿ? ಇನ್ನು ಮನೆಯವರನ್ನು ಎಚ್ಚರಿಸಿದರೆ ಅಡುಗೆ ಮನೆಯಲ್ಲಿ ಹಾವನ್ನು ಕಂಡು ಇನ್ನೂ ದೊಡ್ಡ ಅನಾಹುತವಾದೀತೆಂದು ನಿಧಾನವಾಗಿ ಗ್ಯಾಸ್ ಸ್ಟೋವ್ ನ ರೆಗ್ಯುಲೇಟರ್ ಬಿಚ್ಚಿ ಸಿಲಿಂಡರ್ ಅನ್ನು ನಿಧಾನವಾಗಿ ಮನೆಯಾಚೆಯ ವರಾಂಡಕ್ಕೆ ಸಾಗಿಸಿದೆ.




ನಾನು ಸಿಲಿಂಡರ್ ಅನ್ನು ಎತ್ತಿ ಸಾಗಿಸುವಾಗ ತಳದಲ್ಲಿ ತೆಕ್ಕೆಯಾಕಿ ಮಲಗಿದ್ದ ಹಾವು ಕೆಳಗೆ ಬೀಳುವುದೇನೋ ಎಂದು ಹೆದರಿದ್ದೆ. ಆದರೆ ಹಾಗೇನೂ ಆಗಲಿಲ್ಲ. ಈಗ ಮನೆಯವರನ್ನೆಲ್ಲಾ ಎಚ್ಚರಿಸಿದೆ. ಹಾವನ್ನು ತೋರಿಸಿದೆ. ಅಡುಗೆ ಮನೆಯ ಸಿಲಿಂಡರ್ ಕೆಳಗೆ ಹಾವು ಬಂದಿದೆ ಇಲ್ಲೇ ದಿನಾ ಅಡುಗೆ ಮಾಡಿ, ಗುಡಿಸಿ ಸಾರಿಸಿ ಎಲ್ಲಾ ಮಾಡಿದ್ದಿರಾ. ಇಷ್ಟು ದೊಡ್ಡ ಹಾವು ನಿಮ್ಮ ಕಣ್ಣಿಗೆ ಕಾಣಲಿಲ್ಲವೇ? ಎಂದು ಜಬರ್ದಸ್ತ್ ಮಾಡಿದೆ. ಪಾಪ ಮೊದಲೇ ಹಾವಿಗೆ ಹೆದರಿದ್ದರಿಂದ ಅವರು ಮರುಮಾತಾಡಲಿಲ್ಲ. ನಿದ್ದೆ ಕಣ್ಣಲ್ಲೇ ಕಣ್ಣುಜ್ಜುತ್ತಾ ಹಾವನ್ನು ನೋಡುತ್ತಾ ನಿಂತರು. ಹರಸಾಹಸ ಮಾಡಿ ಸಿಲಿಂಡರ್ ನ ತಳದಿಂದ ಹಾವನ್ನು ಕಡ್ಡಿಯಿಂದ ಹೊರತೆಗೆದು ನೋಡಿದರೆ ಹೆಬ್ಬೆರಳು ಗಾತ್ರದ ಒಂದು ಅಡಿ ಉದ್ದವಿದ್ದ ಅತ್ಯಂತ ವಿಷಕಾರಿ ಗರಗಸ ಮಂಡಲ ಹಾವು. ಇದು ಕೊಳಕು ಮಂಡಲ ಹಾವಿಗಿಂತ ವಿಷಕಾರಿ. ತ್ರಿಭುಜಾಕಾರದ ತಲೆ ಮತ್ತು ದೊಡ್ಡಕಣ್ಣುಳ್ಳ ಒಣ ಎಲೆಯ ಬಣ್ಣದ ತಿಳಿ ಕಂದು ಬಣ್ಣದ ಹಾವು. ಅದನ್ನು ನೋಡಿ ನನಗೆ ಭಯವಾಯಿತು. ನಾನು ಇದನ್ನು ಹಲವುಬಾರಿ ಬೆಟ್ಟಗಳ ಬಳಿ, ಕಾಡಿನಲ್ಲಿ ಸಂಜೆಯ ವೇಳೆ ನೋಡಿದ್ದೆ. ಇದು ಭಾರತದ ಹಿಮಾಲಯ ಮತ್ತು ನೈಋತ್ಯ ಭಾರತದಲ್ಲಿ ಬಿಟ್ಟು ಎಲ್ಲಾ ಕಡೆ ಕಾಣಸಿಗುತ್ತದೆ.

ಬಂಡೆಗಳ ಮೇಲೆ ಎಲೆಗಳ ನಡುವೆ ಅಡಗಿ ಕುಳಿತರೆ ಇದು ಕಾಣುವುದೇ ಇಲ್ಲ. ಸಂಜೆಯ ವೇಳೆ ಹೆಚ್ಚು ಕ್ರಿಯಾಶೀಲವಾಗಿರುವ ಆಕ್ರಮಣಕಾರಿ ಹಾವು. ಭಯಗೊಂಡಾಗ ಚಕ್ಕುಲಿಯಾಕಾರಕ್ಕೆ ತೆಕ್ಕೆಹಾಕಿ ಗರಗಸ ಕುಯ್ಯುವಾಗ ಬರುವ ಸದ್ದಿನಂತೆ ಸದ್ದು ಮಾಡುತ್ತದೆ. ಇಲಿ, ಕಪ್ಪೆ, ಓತಿ, ಕೀಟಗಳನ್ನು ಹಿಡಿದು ತಿನ್ನುವ ಈ ಹಾವು ನಮ್ಮ ಮನೆಯ ಅಡುಗೆ ಮನೆಗೆ ಹೇಗೆ ಬಂತು ಎಂಬುದೇ ನನಗೆ ತಿಳಿಯಲಿಲ್ಲ. ಸಿಲಿಂಡರಿನ ತಳದಿಂದ ನಿಧಾನಕ್ಕೆ ಹೊರಬಂದ ಹಾವನ್ನು ಕಡ್ಡಿಯಿಂದ ಎತ್ತಿ ದೂರ ಹಾಕಿ ಬಂದೆ. ಈ ಪ್ರಭೇದದ ಹಾವುಗಳು ರಸ್ತೆ ದಾಟುವಾಗ ಗಾಡಿಗಳ ಚಕ್ರಕ್ಕೆ ಸಿಕ್ಕಿ ಸತ್ತು ಬಿದ್ದದ್ದನ್ನು ಹಲವು ಬಾರಿ ನೋಡಿದ್ದೇನೆ.






ಮಾರನೆ ದಿನ ಸಂಜೆ ಆರರ ಹೊತ್ತಿಗೆ ಮನೆಯ ಬಾಗಿಲಿನಲ್ಲೇ ಇನ್ನೊಂದು ಮೊಳ ಉದ್ದದ ನಸುಗೆಂಪು ಬಣ್ಣದ ಹಾವು ಕಾಣಿಸಿಕೊಳ್ಳುವುದೇ? ಅದು ಒಂದು ಮಣ್ಣಾವು ಎಂದು ನನಗೆ ಗೊತ್ತಿದ್ದರಿಂದ ಒಂದು ಬಕೆಟ್ ತಂದು ಕಡ್ಡಿಯಿಂದ ಹಾವನ್ನು ಎತ್ತಿ ಬಕೆಟ್ ಒಳಗಾಕಿ ಗೆಳೆಯ ಅಶ್ವತ್ ರವರಿಗೆ ಕರೆ ಮಾಡಿ, ಅವರಿಗೆ ಅದನ್ನು ಎಲ್ಲಾದರೂ ದೂರಬಿಡಿ ಎಂದು ಕೊಟ್ಟು ಕಳುಹಿಸಿದೆ. ಅಲ್ಲೆ ನನ್ನ ಕಾಲ ಬಳಿ ರೋಜಿ ಕುಳಿತಿತ್ತು.  ಕಪ್ಪು ಗಟ್ಟಿದ್ದ ಆಕಾಶದ ಮೋಡ ಕರಗಿ, ಧೋ... ಎಂದು ಮಳೆ ಸುರಿಯತೊಡಗಿತು. ಮನೆ ಮುಂದೆ ರಸ್ತೆಯಲ್ಲಿ ನೀರು ಹರಿಯಿತು. ಜೋರಾಗಿ ಚಲಿಸುವ ಕಾರು ಬೈಕುಗಳ ಬೆಳಕು ಮಳೆಯಲ್ಲಿ ಕತ್ತಲನ್ನು ಸೀಳಿ ಸಾಗುತ್ತಿದ್ದವು. ಮಳೆಯಲ್ಲಿ ಬೇಟೆಗೆ ಹೊರ ಹೋಗಿದ್ದ ರೋಜಿ ರಸ್ತೆ ದಾಟುವಾಗ ಮಳೆಯಲ್ಲಿ ಹೆಡ್ ಲೈಟಿನ ಬೆಳಕಲ್ಲೆ ಯಾವುದೋ ಗಾಡಿ ಗುದ್ದಿ ನಡು ರಸ್ತೆಯಲ್ಲಿ  ಬಿದ್ದಿತ್ತು! ಪ್ರೀತಿಯಿಂದ ಸಾಕಿದ ರೋಜಿ ಸತ್ತು ಬಿದ್ದಿದ್ದಳು. ಅವಳ ಕಳೆಬರವನ್ನ ರಸ್ತೆ ಬದಿಯಲ್ಲೇ ಗುಂಡಿ ತೋಡಿ ಮಣ್ಣು ಮಾಡಿದೆ. ಅವಳ ಸಮಾಧಿಯ ಮೇಲೆ ಒಂದು ಗುಲ್ಮೊಹರ್ ಸಸಿ ನೆಟ್ಟಿದ್ದೇನೆ. ಗಿಡ ಬೆಳೆಯುತ್ತಿದೆ. ಈಗ ನನ್ನ ಮನೆಯಲ್ಲಿ ಹಾವುಗಳು ಕಾಣುತ್ತಿಲ್ಲ.


- ಶಂಕರಪ್ಪ ಕೆ. ಪಿ.

ಅಥಿತಿ ಶಿಕ್ಷಕರು, GHPS ಕೋನಸಂದ್ರ,

ಬೆಂಗಳೂರು.




ವಿ. ವಿ. ಅಂಕಣ

# ಕೇವಲ ಘಂಟೆಗಳಲ್ಲಿ ಕೊಳೆಯುತಿರುವ ಪ್ಲಾಸ್ಟಿಕ್!

ಊಟವಿಲ್ಲದ ಒಂದು ದಿನವನ್ನು ಸಾಮಾನ್ಯವಾಗಿ ಎಲ್ಲರೂ ಕಳೆದಿರುತ್ತಾರೆ. ನನ್ನಂಥಹ ತಿಂಡಿಪೋತರಿಗೂ ಇದು ಕೆಲ ಅನಿವಾರ್ಯ ಸನ್ನಿವೇಶಗಳಲ್ಲಿ ಸಾಧ್ಯವಾಗಿದೆ. ಹಾಗಾಗಿ ಉಳಿದವರಿಗೆ ಇದು ಸಾಧ್ಯವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ ಬಿಡಿ. ಕೆಲವರು ತಿಂಗಳಿಗೊಮ್ಮೆ ಏಕಾದಶಿಯ ಉಪವಾಸ ಮಾಡುವುದು ಸರ್ವೇ ಸಾಮಾನ್ಯವಾದರೂ, ಅಕಸ್ಮಾತ್ ತಮ್ಮ ಅತೀ ಪ್ರಿಯವಾದ ಆಹಾರ ಆ ಸಮಯದಲ್ಲಿ ಕಣ್ಣ ಮುಂದಿದ್ದರೂ ತಿನ್ನದ ಸ್ವಾಮಿನಿಷ್ಠೆ ಕಂಡು ನನಗಂತೂ ಬೆರಗಾಗುತ್ತದೆ. ಅಷ್ಟು ಪ್ರಿಯವಾದ ಆಹಾರ ಮುಂದಿದ್ದರೂ ತಿನ್ನದಿರುವಂತಹ ಕರ್ಮ ಏತಕ್ಕೆ? ಎಂಬುದು ನನ್ನ ವಾದ. ದಾಸರೇ ಹೇಳುವ ಹಾಗೆ ಎಲ್ಲಾರು ಮಾಡುವುದು ಹೊಟ್ಟೆಗಾಗಿ! ಅಲ್ಲವೇ?

ಪ್ಲಾಸ್ಟಿಕ್ ಇಲ್ಲದ ಒಂದು ದಿನವನ್ನು ಪಾಲಿಸುವುದು ಪಕ್ಕಕ್ಕಿಡಿ, ಪ್ಲಾಸ್ಟಿಕ್ ಇಲ್ಲದ ಒಂದು ದಿನವನ್ನು ಊಹಿಸಿಕೊಳ್ಳಲೂ ಸಹ ಗಾಬರಿಯಾಗುವ ದುಸ್ಥಿತಿಯಲ್ಲಿ ನಾವಿದ್ದೇವೆ. ಅದೇನು ಕಷ್ಟವಿಲ್ಲ ಬಿಡಿ ಎಂದು ಲೇವಡಿ ಮಾಡುವುದಾದರೆ, ಪ್ಲಾಸ್ಟಿಕ್ ಇಲ್ಲದ ಒಂದು ದಿನವನ್ನು ನೋಡಿಯೇ ಬಿಡೋಣ ಬನ್ನಿ.

ಪ್ಲಾಸ್ಟಿಕ್ ಇಲ್ಲದ ಒಂದು ದಿನದಲ್ಲಿ, ಬೆಳಿಗ್ಗೆ ಏಳುವ ಸಮಯ ನೋಡಲು ಗಡಿಯಾರ ಇರದು, ಹಲ್ಲುಜ್ಜುವ ಬ್ರಶ್ ಇರದು, ಪೇಸ್ಟ್ ಇರದು, ಸ್ನಾನ ಮಾಡಲಿಕ್ಕೆ ಬಳಸುವ ನಲ್ಲಿಯಿಂದ ಹಿಡಿದು ಬಕೆಟ್, ಜಗ್, ಕೆಲವರು ಬಳಸುವ ಊಟದ ಪ್ಲೇಟ್, ಧರಿಸುವ ಕೆಲವು ಬಗೆಯ ಬಟ್ಟೆ, ಬೆಲ್ಟ್, ಕೈ ಗಡಿಯಾರ, ಕೆಲಸಕ್ಕೆ ತೆರಳಲು ಬಳಸುವ ವಾಹನಗಳು, ಕೆಲಸದಲ್ಲಿ ಬಳಸುವ ಕಂಪ್ಯೂಟರ್, ಪೆನ್, ಮೌಸ್, ಚಾರ್ಜರ್, ಸೆಲ್ ಫೋನ್ ಗಳಿಂದ ಹಿಡಿದು ಕೊನೆಗೆ ನಾವು ನಿದ್ದೆಗೆ ಜಾರುವ ಮುನ್ನ ಬಳಸುವ ಗುಡ್ ನೈಟ್ ನ ವರೆಗೆ ಎಲ್ಲಾ ಪ್ಲಾಸ್ಟಿಕ್ ಮಯ. ಒಪ್ಪಿಕೊಳ್ಳಿ, ಎಷ್ಟೋ ಬಾರಿ ನೀವು ಕಂಡ ಕನಸಿನಲ್ಲೂ ಪ್ಲಾಸ್ಟಿಕ್ ಬಳಸಿರುತ್ತೀರಿ. ಅಲ್ಲವೇ? ನಮ್ಮ ಅತಿಯಾದ ಈ ಪ್ಲಾಸ್ಟಿಕ್ ಬಳಕೆಯಿಂದಲೇ 2016ರಲ್ಲಿ 700 ಕೋಟಿ ಜನಸಂಖ್ಯೆಯ ಮನುಷ್ಯರು ಸುಮಾರು 320 ಮಿಲಿಯನ್ ಟನ್ ನಷ್ಟು ಪ್ಲಾಸ್ಟಿಕ್ ಅನ್ನು ಉತ್ಪಾದಿಸಿದ್ದೇವೆ. ಇದು 2034ರಲ್ಲಿ ದ್ವಿಗುಣಗೊಳ್ಳುವ ಸಾಧ್ಯತೆ ಹೆಚ್ಚಿದೆ, ಎನ್ನುತ್ತಿದೆ ನಮ್ಮದೇ ಸಂಶೋಧನೆ. ಇದರಲ್ಲಿ ಸುಮಾರು 60-90% ಪ್ಲಾಸ್ಟಿಕ್, ಸಮುದ್ರ ಸೇರುತ್ತಿದ್ದು ಪ್ರತೀ ವರ್ಷಕ್ಕೆ ಅಲ್ಲಿನ 1 ಲಕ್ಷ ಸಸ್ತನಿಗಳ ಮತ್ತು ಆಮೆಗಳ ಹಾಗೂ 10 ಲಕ್ಷ ಸಮುದ್ರ ಪಕ್ಷಿಗಳ ಮಾರಣಹೋಮಕ್ಕೆ ನಾವೇ ನೇರ ಕಾರಣ. ಅಲ್ಲದೆ ಉಳಿದ ಪ್ಲಾಸ್ಟಿಕ್ ಗಳು ಬಿಸಿಲು, ಮಳೆ ಮತ್ತು ಗಾಳಿಗೆ ಸಣ್ಣ ಸಣ್ಣ ಕಣಗಳಾಗಿ ಸಮುದ್ರದಲ್ಲಿನ ನೀರಿಗೆ ಮೈಕ್ರೊ ಪ್ಲಾಸ್ಟಿಕ್ ನ ರೂಪದಲ್ಲಿ ಸೇರುತ್ತಿವೆ. ಅಂತಹ ಪ್ಲಾಸ್ಟಿಕ್ ಅನ್ನು ಆಹಾರವಾಗಿ ಭಾವಿಸಿ ತಿನ್ನುವ ಎಷ್ಟೋ ಮೀನುಗಳು

ಸಾಯುತ್ತಿವೆ, ಹಾಗೂ ನಮ್ಮ ಆಹಾರ ಜಾಲದೊಳಕ್ಕೆ ನುಸುಳಿ, 'ಮಾಡಿದ್ದುಣ್ಣೋ ಮಾರಾಯ' ಎಂಬ ಗಾದೆಯ ಕಹಿ ನಿದರ್ಶನವಾಗುತ್ತಿದೆ.

ಚಂದ್ರಯಾನ, ಮಂಗಳಯಾನಗಳಂತಹ ಸ್ವಂತವಾಗಿ ತಯಾರಿಸಿದ ಉಪಗ್ರಹಗಳ ಆಕಾಶಯಾನಕ್ಕೆ ಕಳಿಸುವ ತಂತ್ರಜ್ಞಾನ ಹೊಂದಿರುವ ನಮಗೆ, ಈ ಪ್ಲಾಸ್ಟಿಕ್ ಸಮಸ್ಯೆಯನ್ನು ಪರಿಹರಿಸಲು ಯಾವುದೂ ತಂತ್ರಜ್ಞಾನವಿಲ್ಲವೇ? ಎಂದು ಪ್ರಶ್ನಿಸುವವರಿಗೇ ಈ ಮಾಸದ ವಿ ವಿ ಅಂಕಣ. ಹೊಸ ಸಂಶೋಧನೆಯ ಅನುಸಾರ ಕೆಲವು ಕಾರ್ಬನ್ ನ್ಯಾನೊ ಟ್ಯೂಬ್ ಗಳ ಸಹಾಯದಿಂದ ಕೋಟ್ಯಾಂತರ  ಜೀವಿಗಳಿಗೆ ಮಾರಕವಾಗಿರುವ ಹಾಗೂ ಬೇರೆ ಪ್ಲಾಸ್ಟಿಕ್ ಗಳಂತೆ ಸಂಗ್ರಹಿಸಲಾಗದ ಮೈಕ್ರೋ ಪ್ಲಾಸ್ಟಿಕ್ ಗಳನ್ನು ಕೇವಲ ಕೆಲವು ಘಂಟೆಗಳಲ್ಲಿ, ಸ್ವಾಭಾವಿಕವಾಗಿ ಕೊಳೆಯುವ ವಸ್ತುವಾಗಿ ಪರಿವರ್ತಿಸುತ್ತವೆಯಂತೆ.




ನಮಗೆಲ್ಲಾ ತಿಳಿದಿರುವ ಸಾಮಾನ್ಯ ಜ್ಞಾನದ ಅನುಸಾರ, ನಾವು ಬಳಸುವ ಪ್ಲಾಸ್ಟಿಕ್ ವಸ್ತುಗಳು ಸ್ವಾಭಾವಿಕವಾಗಿ ಪ್ರಕೃತಿಗೆ ಸೇರಲು ಕೆಲವು ದಶಕಗಳಿಂದ ಹಿಡಿದು, ಕೆಲವು ಸಾವಿರ ವರುಷಗಳ ಸಮಯಾವಕಾಶ ಬೇಕಾಗುತ್ತದೆ. ಎಷ್ಟೇ ಅತ್ಯಾಧುನಿಕ ತಂತ್ರಜ್ಞಾನ ಬಳಸಿ ನಾವು ಕಲುಷಿತ ನೀರನ್ನು ಶುದ್ಧೀಕರಿಸಿದರೂ ಅಲ್ಲಿನ ಮೈಕ್ರೋ ಪ್ಲಾಸ್ಟಿಕ್ ಅನ್ನು ಶೋಧಿಸುವುದು ಅಸಾಧ್ಯ.ಹಾಗಾಗಿ ಅದನ್ನು ಸ್ವಾಭಾವಿಕವಾಗಿ ಕೊಳೆಯಲು ಬಿಟ್ಟು ಸಾವಿರಾರು ವರ್ಷ ಕಾಯುವುದಕ್ಕಿಂತ ಅದನ್ನು ವೇಗವಾಗಿ ಕೊಳೆಯುವ ವಸ್ತುವಾಗಿ ಮಾಡಿದರೆ ಎಷ್ಟು ಪರಿಣಾಮಕಾರಿ ಅಲ್ಲವೇ? ಇದಕ್ಕಾಗಿ ನಮ್ಮ ಈ ಹೊಸ ಸಂಶೋಧನೆಯ ಸಹಾಯ ಪಡೆದು ನಮ್ಮ ನೀರಿನ ಶುದ್ಧೀಕರಣ ಘಟಕಗಳಲ್ಲಿ ಅಳವಡಿಸಿದರೆ ಸಾಕು.

ಈ ಹೊಸ ಸಂಶೋಧನೆಯಲ್ಲಿ ಸಾರಜನಕ ಲೇಪಿತ ಕಾರ್ಬನ್ ನ್ಯಾನೋ ಟ್ಯೂಬ್ (Nano Tube)ಗಳನ್ನು ಬಳಸಲಾಗಿದ್ದು, ಇವುಗಳು ಪೆರಾಕ್ಸಿಮೋನೋಸಲ್ಫೇಟ್ (Peroxymonosulfate) ಗಳ ಜೊತೆಗೆ ಸೇರಿ ಪ್ರತಿಕ್ರಿಯಾತ್ಮಕ ಆಮ್ಲಜನಕದ ರಾಸಾಯನಿಕ ಗುಂಪುಗಳನ್ನು ಬಿಡುಗಡೆ ಮಾಡುತ್ತವೆ. ಅವುಗಳು ಮೈಕ್ರೋ ಪ್ಲಾಸ್ಟಿಕ್ ನ ಜೊತೆಗೆ ಪ್ರತಿಕ್ರಿಯಿಸಿ ಕೊಳೆಯುವ ಆಲ್ಡಿಹೈಡ್ ಮತ್ತು ಕಾರ್ಬೋಕ್ಸಿಲಿಕ್ ಆಮ್ಲವಸ್ತುಗಳಾಗಿ ಕತ್ತರಿಸುತ್ತವೆ. *ಕೊಳೆಯುವ ವಸ್ತುಗಳಾಗಿ ಮಾರ್ಪಾಡಾಗುತ್ತಿರುವ ಪ್ಲಾಸ್ಟಿಕ್*

ಈ ಕ್ರಿಯೆಯನ್ನು 120 ಡಿಗ್ರಿ ಸೆಲ್ಷಿಯಸ್ ತಾಪಮಾನದಲ್ಲಿ ಮಾಡಿದಾಗ ಕೇವಲ 8 ಘಂಟೆಗಳಲ್ಲಿ ನೀರಿನಲ್ಲಿದ್ದ ಒಟ್ಟು ಮೈಕ್ರೋ ಪ್ಲಾಸ್ಟಿಕ್ ನಲ್ಲಿ 30-50% ಪ್ಲಾಸ್ಟಿಕ್ ಅನ್ನು ಕೊಳೆಯುವ ವಸ್ತುಗಳಾಗಿ ವಿಭಜಿಸಿದ್ದವು ಎನ್ನುತ್ತಾರೆ, ಸಂಶೋಧನಾಕಾರ ಜಿಯಾನ್ ಕ್ಯಾಂಗ್.

ಇಷ್ಟಾದರೆ ಸಾಲದು ಮೈಕ್ರೋ ಪ್ಲಾಸ್ಟಿಕ್ ಅನ್ನು ಕೊಳೆಯುವ ಆಲ್ಡಿಹೈಡ್ ಮತ್ತು ಕಾರ್ಬೋಕ್ಸಿಲಿಕ್ ಆಮ್ಲ ವಸ್ತುಗಳಾಗಿ ವಿಭಜಿಸಿದ ನಂತರ ಅವುಗಳು ನೀರಿನಲ್ಲೇ ಇರುವ ಬೇರೆ ಜೀವರಾಶಿಗೆ ಹಾನಿಕಾರಕವಾಗಿರಬಹುದು ಅಲ್ಲವೇ? ಅದನ್ನು ಪರೀಕ್ಷಿಸಲು ಎರಡು ವಾರಗಳ ಕಾಲ ಇಂತಹ ವಸ್ತುಗಳಿದ್ದ ನೀರನ್ನು ಪರೀಕ್ಷಿಸಿದಾಗ ನೀರಿನಲ್ಲಿದ್ದ



ಕೊಳೆಯುವ ವಸ್ತುಗಳಾಗಿ ಮಾರ್ಪಾಡಾಗುತ್ತಿರುವ ಪ್ಲಾಸ್ಟಿಕ್




ಸುರುಳಿಯಾಕಾರದಲ್ಲಿರುವ ನ್ಯಾನೋ ಟ್ಯೂಬು

ಪಾಚಿ ಸಸ್ಯಕ್ಕೆ ಯಾವುದೇ ಹಾನಿಯಾಗಿರಲಿಲ್ಲ. ಹಾಗೆಂದು ಈ ಸಂಶೋಧನೆ 100% ಸುರಕ್ಷಿತ ಎಂದು ಹೇಳಲಾಗುವುದಿಲ್ಲ. ಏಕೆಂದರೆ ನೀರಿನಲ್ಲಿ ಇನ್ನೂ ಸಹಸ್ರಾರು ಜೀವಿಗಳ ಆವಾಸವಿದೆ; ಅವುಗಳ ಸುರಕ್ಷತೆಯ ಬಗ್ಗೆ ತಿಳಿಯಲು ಇನ್ನೂ ಹೆಚ್ಚಿನ ಪ್ರಯೋಗಗಳ ಅವಶ್ಯಕತೆ ಇದೆ. ಹಾಗೂ ನಿಮಿಷಗಳಲ್ಲಿ ಸಾವಿರಾರು ಲೀಟರ್ ಶುದ್ಧೀಕರಿಸುವ ನೀರಿನ ಘಟಕಗಳಲ್ಲಿ ನೀರನ್ನು ಅಷ್ಟು ಬೇಗ 120 ಡಿಗ್ರಿ ಸೆಲ್ಸಿಯಸ್ ಗೆ ತರುವುದೂ ಸಹ ಸವಾಲಾಗುತ್ತದೆ. ಇವುಗಳ ಕಡೆ ಸ್ವಲ್ಪ ಗಮನಹರಿಸಿ ಈ ಸಂಶೋಧನೆ ಕಾರ್ಯರೂಪಕ್ಕೆ ಬಂದರೆ, ನಮ್ಮ ಸುತ್ತಲಿನ ಜೀವ ವೈವಿಧ್ಯಕ್ಕೆ ನಾವು ಮಾಡುತ್ತಿರುವ ಹಾನಿಯಲ್ಲಿ ಕಿಂಚಿತ್ತಾದರೂ ಕಡಿಮೆ ಮಾಡಿ ಪರಿಸರಕ್ಕೆ ನಾವು ಮಾಡಿರುವ ಹಾನಿಯ ಸ್ವಲ್ಪ ಪಾಲು ಕ್ಷೀಣಿಸಿ ನಮ್ಮ ಪಾಪದ ರಾಶಿಯಲ್ಲಿ ಕೆಲವು ಮೈಕ್ರಾನ್ ಪಾಪವನ್ನು ಪ್ರಾಯಶ್ಚಿತ್ತ ಮಾಡಿಕೊಂಡ ಹಾಗೆಯೇ ಸರಿ.

ಇಲ್ಲಿ ನಾವು ಮುಖ್ಯವಾಗಿ ಯೋಚಿಸಬೇಕಾದ ಇನ್ನೊಂದು ಸಂಗತಿ ಇದೆ. ಈಗ ಇರುವ ಪ್ಲಾಸ್ಟಿಕ್ ಮಾಲಿನ್ಯವನ್ನು ಕಡಿಮೆಗೊಳಿಸುವ ಹಾದಿಯಲ್ಲಿ ಈ ಸಂಶೋಧನೆ ನೆರವಾಗುವ ಸಾಧ್ಯತೆ ಇರಬಹುದು. ಆದರೆ ನಮ್ಮ ಪ್ಲಾಸ್ಟಿಕ್ ಬಳಕೆಯ ನಾವು ಪ್ರತಿಯೊಬ್ಬ ಪ್ರಜೆಯೂ ಕಡಿಮೆ ಮಾಡದೆ ಹೋದರೆ ಇಂತಹ ಸಾವಿರ ಸಂಶೋಧನೆಗಳ ಮಾಡಿಯಾದರೂ ಫಲವೇನು? ಸಾಕು. ಸಮಸ್ಯೆಗಳ ಅವಲೋಕನೆ ಬೇಕಾದಷ್ಟು ಮಾಡಿದ್ದಾಯಿತು. ಈಗ ಸಮಸ್ಯೆಗಳ ಪರಿಹಾರವನ್ನು ಯೋಚಿಸಿ ಕಾರ್ಯರೂಪಕ್ಕೆ ತರುವ ಸಮಯ. ಹಾಗೆಂದು ನಾವೇನು ಹೋಗಿ ಪ್ಲಾಸ್ಟಿಕ್ ತಯಾರಿಸುವ ಕಾರ್ಖಾನೆಯ ಮುಂದೆ ಧರಣಿ ಕೂರಬೇಕಾಗಿಲ್ಲ. ನಮ್ಮ ಜೀವನದ ಅವಿಭಾಜ್ಯ ಅಂಗವಾಗಿ ನಾವು ಮಾಡಿಕೊಂಡಿರುವ ಎಷ್ಟೋ ಅನಾವಶ್ಯಕ ಪ್ಲಾಸ್ಟಿಕ್ ಅನ್ನು ಒಂದೊಂದೇ ತ್ಯಜಿಸುತ್ತಾ ಬಂದರೆ ಸಾಕು.

ಇಂದೇ ಸಂಕಲ್ಪ ಮಾಡಿ ಇಂದಿನಿಂದ ಈ ವಿ ವಿ ಅಂಕಣ ಓದಿದ ನಂತರವಾದರೂ ನಾನು ಈ ಅನಾವಶ್ಯಕ ಪ್ಲಾಸ್ಟಿಕ್ ಅನ್ನು ತ್ಯಜಿಸಿ ಅದಕ್ಕೆ ಸ್ವಾಭಾವಿಕ ವಸ್ತುವನ್ನು ಪರ್ಯಾಯ ಹುಡುಕಿ, ನನ್ನ ಜೀವನಪರ್ಯಂತ ಉಪಯೋಗಿಸುವ ಪ್ರಕ್ರಿಯೆಯನ್ನು ಆರಂಭಿಸುತ್ತೇನೆ ಎಂದು. ಹಾಗೆಯೇ ಪ್ರತೀ ವರುಷ ನಿಮ್ಮ ಹುಟ್ಟು ಹಬ್ಬದ ಸುಸಂದರ್ಭದಲ್ಲಿ ಇನ್ನೊಂದು ಅನಾವಶ್ಯಕ ಪ್ಲಾಸ್ಟಿಕ್ ಅನ್ನು ತ್ಯಜಿಸಿ. ಹೀಗೆ ಮಾಡುತ್ತಾ ಹೋದರೆ ನಮ್ಮ ಹುಟ್ಟು ಹಬ್ಬಕ್ಕೆ ಒಂದು ಹೊಸ ಅರ್ಥ ಸಿಗಬಹುದು. ನನಗೆ ತಿಳಿದಿದೆ, ಇಂತಹ ಇನ್ನೂ ಹತ್ತು ಹಲವು ಪರಿಹಾರಗಳು ನಿಮ್ಮ ತಲೆಯಲ್ಲಿ ಚಿಗುರುತ್ತಿವೆ. ನಿಮ್ಮ ಪರಿಹಾರಗಳನ್ನು ನಮಗೂ ತಿಳಿಸಿ ನಾವು ಇನ್ನೂ ಹಲವರಿಗೆ ಅದನ್ನು ಹಂಚುವ ಪ್ರಾಮಾಣಿಕ ಪ್ರಯತ್ನ ಮಾಡುತ್ತೇವೆ.

- ಜೈ ಕುಮಾರ್ ಆರ್.

ಡಬ್ಲ್ಯೂ. ಸಿ. ಜಿ., ಬೆಂಗಳೂರು

ಇ-ಮೇಲ್ : kaanana.mag@gmail.com

ವಾಟ್ಸಾಪ್ ನಂಬರು : 9066640808






# ಅಡವಿಯಲ್ಲಿನ ಪಾತರಗಿತ್ತಿಯ ಪರಿಚಯ

ಕೀಟಗಳ ಲೋಕವೇ ಒಂದು ವಿಸ್ಮಯ ಪ್ರಪಂಚ. ಅವುಗಳ ಬಗ್ಗೆ ತಿಳಿಯುತ್ತಾ ಹೊರಟರೆ ಮುಗಿಸಲು ಇಡೀ ಜೀವಮಾನವೇ ಸಾಲದು. ಅವುಗಳ ಜೀವನ ಚಕ್ರ, ಬೇಟೆಯಾಡುವ ಕೌಶಲ್ಯ, ಶತ್ರುವಿನಿಂದ ರಕ್ಷಿಸಿಕೊಳ್ಳಲು ಅಳವಡಿಸಿಕೊಂಡಿರುವ ಚಾಣಾಕ್ಷತೆಗಳು ಅತಿ ಬುದ್ಧಿವಂತ ಜೀವಿ ಎನಿಸಿರುವ ಮಾನವನನ್ನು ಚಕಿತಗೊಳಿಸುತ್ತವೆ. ಪ್ರಪಂಚದಲ್ಲಿನ 50 ಭಾಗಕ್ಕಿಂತ ಹೆಚ್ಚು ಜೀವಿಗಳು ಈ ಕೀಟಗಳಾಗಿವೆ. ಭೂಮಿಯ ಮೇಲಿನ ಪ್ರತೀ ಮೂಲೆಯಲ್ಲೂ ಕಾಣಸಿಗುವ ಇವು ಪರಿಸರದ ಸಮತೋಲನ ಕಾಪಾಡುವುದರಲ್ಲಿ ಬಹುಮುಖ್ಯ ಪಾತ್ರವಹಿಸುತ್ತವೆ.

ಇನ್ನು ಕೀಟಗಳ ಒಂದು ಗುಂಪಾಗಿರುವ ಚಿಟ್ಟೆಗಳ ಬಗ್ಗೆ ಹೇಳುವುದಾದರೆ, ಇವು ತಮ್ಮ ಸೌಂದರ್ಯದಿಂದ ಎಲ್ಲರನ್ನೂ ಮನಸೂರೆಗೊಳಿಸಿವೆ. ಈ ವರ್ಣರಂಜಿತ ಚಿಟ್ಟೆಗಳೇ ಹುಟ್ಟುವಾಗ ನೋಡಲು ಸಹ ಭಯ ಹುಟ್ಟಿಸುವಂತಹ ಕಂಬಳಿ ಹುಳುಗಳಾಗಿರುತ್ತವೆ ಎಂಬುದನ್ನು ಊಹಿಸಲು ಸಹ ಆಗುವುದಿಲ್ಲ. ಈ ಸುಂದರ, ಬಹು ಆಕರ್ಷಕ ಜೀವಿಗಳ ಬಗ್ಗೆ ಸಾಮಾನ್ಯ ಜನರಿಗೆ, ಶಾಲಾ ಮಕ್ಕಳಿಗೆ ತಿಳಿಸಿಕೊಡಬೇಕೆಂಬ ಉದ್ದೇಶದಿಂದ WCGಯು ತನ್ನ 'ಅಡವಿ ಫೀಲ್ಡ್ ಸ್ಟೇಷನ್ ' ನಲ್ಲಿ ಚಿಟ್ಟೆಗಳ ಬಗ್ಗೆ ಒಂದು ದಿನದ ಕಾರ್ಯಕ್ರಮವನ್ನು 28ನೇ ಜೂನ್ 2019 ರಂದು ಹಮ್ಮಿಕೊಂಡಿತ್ತು. ಈ ಕಾರ್ಯಕ್ರಮದಲ್ಲಿ ಹೆಬ್ಬಗೋಡಿ ಸರ್ಕಾರಿ ಪ್ರೌಢಶಾಲೆಯ 35 ವಿದ್ಯಾರ್ಥಿಗಳು ಹಾಗು ಬೇರೆ ಬೇರೆ ಆಯಾಮದ 15 ಅಭ್ಯರ್ಥಿಗಳು ಪಾಲ್ಗೊಂಡಿದ್ದರು.

ಸುಮಾರು ಬೆಳಗ್ಗೆ 10.00 ಘಂಟೆಗೆ ಕಾರ್ಯಕ್ರಮವು ಶುರುವಾಯಿತು. ಚಿಟ್ಟೆ ತಜ್ಞರು ಹಾಗು ಆ ದಿನದ ಸಂಪನ್ಮೂಲ ವ್ಯಕ್ತಿ, HRBSF (Harish R Bhat Science Foundation) ನ ಸಂಸ್ಥಾಪಕರಾದ ಚತುರ್ವೇದ್ ರವರು ಚಿಟ್ಟೆಗಳನ್ನು ಏಕೆ ಕೀಟಗಳ ಗುಂಪಿಗೆ ಸೇರಿಸುತ್ತಾರೆ, ಕೀಟಗಳೆಂದರೆ ಯಾವುವು? ಅವುಗಳ ದೇಹ ರಚನೆ ಹೇಗಿರುತ್ತದೆ? ಕೀಟಗಳಲ್ಲಿ ಎಷ್ಟು ಪ್ರಭೇದಗಳಿವೆ ಹಾಗೂ ಚಿಟ್ಟೆಗಳ ಜೀವನ ಚಕ್ರ, ಅವುಗಳ ಆಹಾರ, ವಲಸೆ ಹೋಗುವುದು, ಪರಿಸರದ ಆರೋಗ್ಯ ಕಾಪಾಡುವಲ್ಲಿ ಇವುಗಳ ಪಾತ್ರವೇನು ಎಂಬುದನ್ನು ಸವಿಸ್ತಾರವಾಗಿ ಚಿತ್ರಗಳ ಸಹಾಯದಿಂದ ತಿಳಿಸಿಕೊಟ್ಟರು.



ನಿಸರ್ಗದ ಸೊಬಗು ತಿಳಿಯುವುದು ಅದನ್ನು ಕಣ್ಣಾರೆ ಕಂಡಾಗಲೇ. ಅದರ ಬದಲು ನಾವು ತರಗತಿಯಲ್ಲಿ ಎಷ್ಟೇ ಪರಿಣಾಮಕಾರಿಯಾಗಿ ತಿಳಿಸಲು ಯತ್ನಿಸಿದರೂ ಅದರ ಪ್ರಯೋಜನ ಅತ್ಯಲ್ಪ ಎಂದು ತಿಳಿದಿರುವ ನಮ್ಮ ತಂಡವು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಅಭ್ಯರ್ಥಿಗಳಿಗೆ ಆ ಸೌಂದರ್ಯದ ಸವಿಯನ್ನು ಪರಿಚಯಿಸಲು ಹಾಗು ತರಗತಿಯಲ್ಲಿ ತಿಳಿಸಿದ್ದ ಚಿಟ್ಟೆಗಳನ್ನು ತೋರಿಸಲು 'ಅಡವಿ ಫೀಲ್ಡ್ ಸ್ಟೇಷನ್' ನ ಅಕ್ಕ ಪಕ್ಕ 'ಚಿಟ್ಟೆ ವೀಕ್ಷಣೆ' ಯನ್ನು ಏರ್ಪಡಿಸಲಾಗಿತ್ತು. ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ 45 ಅಭ್ಯರ್ಥಿಗಳನ್ನು ಮೂರು ತಂಡಗಳನ್ನಾಗಿ ವಿಂಗಡಿಸಿ ಸಂಪನ್ಮೂಲ ವ್ಯಕ್ತಿಗಳ ಜೊತೆ ಚಿಟ್ಟೆ ವೀಕ್ಷಣೆಗೆ ಅನುವುಮಾಡಿಕೊಡಲಾಯಿತು. ಪ್ರತಿ ತಂಡದವರು ಸರಿ ಸುಮಾರು ಹದಿನೈದು ವಿವಿಧ ಪ್ರಭೇದದ ಚಿಟ್ಟೆಗಳನ್ನು ದಾಖಲಿಸಿದರು.

2 ಘಂಟೆಗಳ ಕಾಲ ಚಿಟ್ಟೆಗಳನ್ನು ವೀಕ್ಷಿಸಿ ಬಂದ ಅಭ್ಯರ್ಥಿಗಳಿಗೆ ಮಧ್ಯಾಹ್ನದ ಉಪಹಾರವನ್ನು ನೀಡಿ ತಮ್ಮಲ್ಲಿರುವ ಚಿಟ್ಟೆಗಳ ಬಗೆಗಿನ ಪ್ರಶ್ನೆಗಳನ್ನು ತಜ್ಞರ ಜೊತೆ ಚರ್ಚಿಸಿ ಬಗೆಹರಿಸಿಕೊಳ್ಳಲು ಅವಕಾಶ ಕಲ್ಪಿಸಿಕೊಡಲಾಯಿತು. ಅಭ್ಯರ್ಥಿಗಳು ಪ್ರಶ್ನೆಗಳ ಮಳೆಗೈದು ತಮ್ಮಲ್ಲಿರುವ ಆಸಕ್ತಿಯನ್ನು ಅಭಿವ್ಯಕ್ತಪಡಿಸಿದರು. ಅವರ ಮುಖದಲ್ಲಿನ ಆನಂದವು ದಿನದ ಕಾರ್ಯಕ್ರಮದ ಸಾರವನ್ನು ಹೇಳುತ್ತಿತ್ತು .




ಈ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ಸಂಪನ್ಮೂಲ ವ್ಯಕ್ತಿಗಳಾದ ಶ್ರೀಯುತ ಚತುರ್ವೇದ್ ಶೇಟ್, ಕುಮಾರಿ ಚತುರ ಮತ್ತು ಕುಮಾರಿ ಶ್ರದ್ಧಾ ರವರಿಗೆ WCG ತಂಡದ ವತಿಯಿಂದ ತುಂಬು ಹೃದಯದ ಧನ್ಯವಾದಗಳು. ಸುತ್ತಲಿನ ಪರಿಸರಕ್ಕೆ, ಜೀವ ವೈವಿಧ್ಯಕ್ಕೆ ಮಕ್ಕಳನ್ನು ಹಾಗು ಸಾಮಾನ್ಯ ಜನರನ್ನು ಪರಿಚಯಿಸಬೇಕೆಂಬ ಉದ್ದೇಶದಿಂದ WCG ಯು ಪ್ರತಿ ತಿಂಗಳು 'ಅಡವಿ ಫಿಲ್ಡ್ ಸ್ಟೇಷನ್' ನಲ್ಲಿ ವಿವಿಧ ಕಾರ್ಯಕ್ರಮಗಳನ್ನು ಆಯೋಜಿಸುತ್ತದೆ. ಆಸಕ್ತರು ಭಾಗವಹಿಸಲು ಅಥವಾ ಸ್ವಯಂಸೇವಕರಾಗಿ ಕಾರ್ಯ ನಿರ್ವಹಿಸಲು ಇಚ್ಛಿಸುವವರು

ಸಂಪರ್ಕಿಸಿ

ನಾಗೇಶ್ ಓ. ಎಸ್. : 9008261066

ಹಾಗು WCG ಬಗೆಗಿನ ಇನ್ನು ಹೆಚ್ಚಿನ ಮಾಹಿತಿಯನ್ನು ತಿಳಿಯಲು www.indiawcg.org ಗೆ ಭೇಟಿ ನೀಡಿ

- ನಾಗೇಶ್ ಓ. ಎಸ್.

ಡಬ್ಲ್ಯೂ. ಸಿ. ಜಿ., ಬೆಂಗಳೂರು.

# ಪಣತೊಡುವೆವು



ಚಿಟ ಪಟ ಮಳೆಯಲ್ಲಿ
ಟಾರು ರಸ್ತೆಯ ಇಳಿಜಾರಿನಲಿ
ಇಳಿದು ಸಾಗುತಿಹೆವು ನಾವು
ಕಂಬಳಿಯ ಕೊಪ್ಪೆ ಹೊದ್ದು

ನಿತ್ಯದ ಅನ್ನ ಅರಸುತಲಿ
ಮಳೆ ಬಂದರೆ ಬಂತಲ್ಲ ಮಳೆ
ಜಡಿಮಳೆ ಯಾಕಾದರೋ ಬಂತೋ
ಎಂದು ಗೊಣಗುವ ನಗರದವರಲ್ಲ

ಮಳೆ ಹನಿಗೆ ಮಣ್ಣ ಪರಿಮಳ
ಸವಿಯುವವರು ನಾವೆಲ್ಲ
ರೈನುಕೋಟು ಅಂಬ್ರೆಲಾಗಳ
ಗೊಡವೆ ನಮಗೆ ಬೇಕಿಲ್ಲ

ಪ್ಲಾಸ್ಟಿಕ್ ಸಿಂಥೆಟಿಕ್ ಬಳಸುವುದಿಲ್ಲ
ಪರಿಸರ ಪೂರಕವಾದ
ಬಟ್ಟೆ ಕಂಬಳಿಗಳ ಬಿಡುವುದಿಲ್ಲ
ಕಾನನದ ಮಕ್ಕಳು ನಾವು

ವನದೇವತೆಯನು  ರಕ್ಷಿಸಲು
ಎಂದಿಗೂ ಬೆನ್ನ ತೋರೆವು
ಪರಿಸರದೊಂದಿಗೆ ಬಾಳುವ
ಪಣ ತೊಡುವೆವು

- ಸಿ. ಜಿ. ವೆಂಕಟೇಶ್ವರ
ಸಮಾಜ ವಿಜ್ಞಾನ ಶಿಕ್ಷಕರು,
S.S.E.A  ಸರ್ಕಾರಿ ಪ್ರೌಢಶಾಲೆ. ಗೌರಿಬಿದನೂರು.

# ಪ್ರಕೃತಿ ಬಿಂಬ



ಹುಲಿ ಮತ್ತು ಅದರ ಮರಿ © ಶ್ರೀನಿವಾಸ್ ಕೆ. ಎಸ್.

ಆ ಮುಖದಲ್ಲಿ ಕ್ರೌರ್ಯತೆಗಿಂತಲೂ ಹೆಚ್ಚಾಗಿ ಒಂದು ರೀತಿಯ ಗಾಂಭೀರ್ಯ. ಸೂಜಿಯ ಮೊನಚನ್ನೂ ಮೀರಿಸುವ ತೀಕ್ಷ್ಣ ನೋಟ, ಲಲನೆಯರನ್ನೂ ನಾಚಿಸುವ ಗಜಗಾಂಭೀರ್ಯ ನಡಿಗೆ, ದೇಹದ ತುಂಬೆಲ್ಲ ರಂಗೋಲಿಗೂ ಸ್ಪರ್ಧೆ ಒಡ್ಡುವಂಥ ಪಟ್ಟೆ ಪಟ್ಟೆ ಚಿತ್ರ. ಕಣ್ಣಿಗೆ ಬಿದ್ದ ಶಿಕಾರಿಯನ್ನು ಪಟ್ಟುಹಿಡಿದು ಬೆನ್ನತ್ತಿ, ತಿಂದು ತೇಗಿಯೇ ಬರುವ ಖರಾರುವಾಕ್ ಗುರಿ, ಬೇಟೆ ಸಿಕ್ಕು, ಹೊಟ್ಟೆ ತುಂಬಿದ ಮೇಲೆ ಕ್ರೌರ್ಯತೆಗೂ, ತನಗೂ ಸಂಬಂಧವೇ ಇಲ್ಲ ಎಂಬಂತೆ ಆಕಳಿಸಿ ಮಲಗುವ ನಿರುಪದ್ರವಿ ಜೀವಿ! ಹೌದು, ಇದು ಭಾರತದ ರಾಷ್ಟ್ರಪ್ರಾಣಿ ಹುಲಿ. ಪ್ಯಾಂಥೆರಾ ಟೈಗ್ರಿಸ್ ಎಂಬ ವೈಜ್ಞಾನಿಕ ಹೆಸರು ಪಡೆದ ಹುಲಿ ಪ್ರಾಣಿಶಾಸ್ತ್ರದ ಪ್ರಕಾರ ಫೆಲಿಡೇ ಎಂಬ ಕುಟುಂಬಕ್ಕೆ ಸೇರಿದ ಜೀವಿ. 13 ಅಡಿ ಉದ್ದ ಹಾಗು 300 ಕೆಜಿವರೆಗೂ ತೂಗಬಹುದು. ಹುಲಿಗಳ ಆಯಸ್ಸು ಕಾಡಿನಲ್ಲಿ 10 ರಿಂದ 15 ವರ್ಷಗಳು, ಸೆರೆಯಲ್ಲಿ 16 ರಿಂದ 18 ವರ್ಷಗಳು.



ಕೊಂಬಿನ ಗೂಬೆ © ಶ್ರೀನಿವಾಸ್ ಕೆ. ಎಸ್.

ಭಾರತೀಯ ಹದ್ದು-ಗೂಬೆ ಎಂಬುದು ಭಾರತೀಯ ಉಪಖಂಡದಲ್ಲಿ ಕಂಡುಬರುವ ದೊಡ್ಡ ಕೊಂಬಿನ ಗೂಬೆಯ ಒಂದು ಜಾತಿಯಾಗಿದೆ. ಈ ಮೊದಲು ಇದನ್ನು ಯುರೇಷಿಯನ್ ಹದ್ದು-ಗೂಬೆಯ ಉಪಜಾತಿಯಾಗಿ ಪರಿಗಣಿಸಲಾಗುತ್ತಿತ್ತು. ಇವು ಗುಡ್ಡಗಾಡು ಮತ್ತು ಕಲ್ಲಿನ ಪೊದೆಗಳ ಕಾಡುಗಳಲ್ಲಿ ಕಂಡುಬರುತ್ತವೆ ಮತ್ತು ಸಾಮಾನ್ಯವಾಗಿ ಜೋಡಿಯಾಗಿ ಕಂಡುಬರುತ್ತವೆ. ಇವುಗಳು ಇಲಿ ಮೊಲದಂತಹ ಸಣ್ಣ ಪ್ರಾಣಿಗಳನ್ನು ತಿಂದು ಬದುಕುತ್ತವೆ ಕೆಲವೊಮ್ಮೆ ಮರಕುಟಿಗ, ಬಕಪಕ್ಷಿಯಂತಹ ಹಕ್ಕಿಗಳನ್ನು ತಿನ್ನುತ್ತವೆ. ಇವು ಸಾಮಾನ್ಯವಾಗಿ 20 ವರ್ಷ ಬದುಕುತ್ತವೆ.



ಕಪ್ಪು ಚುಕ್ಕೆ ಚಿಟ್ಟೆ © ಶ್ರೀನಿವಾಸ್ ಕೆ. ಎಸ್.

ಕಂಬಳಿ ಹುಳುವಾಗಿ ಕೋಶಾವಸ್ಥೆಗೆ ಹೋಗುವ ಜೀವಿ, ಆಕರ್ಷಕ ಚಿಟ್ಟೆಯಾಗಿ ಹೇಗೆ ಪರಿವರ್ತನೆಗೊಳ್ಳುತ್ತದೆ ಎಂಬುದು ಯಾರಿಗೂ ತಿಳಿಯದ ಪ್ರಕೃತಿಯ ನಿಗೂಢ, ನಮ್ಮ ಕಣ್ ಮುಂದೆಯೇ ನಡೆಯುತ್ತಿರುವ ಈ ಕ್ರಿಯೆಗೆ ಉತ್ತರ ಇರದ ನಮ್ಮಲ್ಲಿ ಇಂತಹ ಅಗೋಚರ ಆಶ್ಚರ್ಯಕರ ಸತ್ಯಗಳು ನಿಸರ್ಗದ ಮಡಿಲಲ್ಲಿ ಎಷ್ಟು ಅಡಗಿವೆಯೋ? ಬಲ್ಲವರಾರು. ಆ ಚಿಟ್ಟೆಗಳಲ್ಲಿ ಒಂದಾದ ಕಪ್ಪು ಚುಕ್ಕಿ ಹೆಸರಿನ ಈ ಚಿಟ್ಟೆಯು ಆಕೃತಿಯಲ್ಲಿ ಚಿಕ್ಕದಾಗಿದ್ದು ತನ್ನ ಕಪ್ಪು-ಬಿಳುಪು ವಿನ್ಯಾಸದಿಂದ ಎಲ್ಲರ ಮನಸೆಳೆಯುತ್ತದೆ.



ನೀಲಿ ಪಟ್ಟೆಯ ನೊಣ © ಶ್ರೀನಿವಾಸ್ ಕೆ. ಎಸ್.

ನೀಲಿ ಪಟ್ಟೆಯ ನೊಣಗಳು ಹೆಸರೇ ಹೇಳುವಂತೆ ದೇಹದ ಮೇಲೆ ನೀಲಿ ಪಟ್ಟೆಗಳನ್ನು ಹೊಂದಿದೆ. ಇದು ಪರಾಗಸ್ಪರ್ಶದಲ್ಲಿ ಅತ್ಯಮೂಲ್ಯ ಪಾತ್ರವನ್ನು ವಹಿಸುತ್ತದೆ. ನಾವು ತಿನ್ನುತ್ತಿರುವ ಊಟ, ಹಣ್ಣು, ಈ ನೀಲಿ ಪಟ್ಟೆಯ ಇನ್ನು ಹಲವಾರು ವಿವಿಧ ಪ್ರಭೇದದ ನೊಣಗಳಿಂದಲೇ ಎಂದರೆ ಖಂಡಿತ ತಪ್ಪಾಗಲಾರದು...

ಛಾಯಾಚಿತ್ರಗಳು : ಶ್ರೀನಿವಾಸ್ ಕೆ. ಎಸ್.

ಲೇಖನ : ವಿವೇಕ. ಎಸ್

# ನೀವೂ ಕಾನನಕ್ಕೆ ಬರೆಯಬಹುದು




ಆನೆ, ಇಂದು ಜಗತ್ತಿನಲ್ಲಿಯೇ ನೆಲದ ಮೇಲೆ ವಾಸಿಸುವ ಅತಿ ದೊಡ್ಡ ಸಸ್ತನಿ. ಮೂರು ಪ್ರಭೇದ ಆನೆಗಳು ಭೂಮಿಯ ಮೇಲೆ ಕಂಡು ಬರುತ್ತದೆ. ಅವುಗಳು ಆಫ್ರಿಕಾದ ಪೊದೆಗಳ ಆನೆ, ಆಫ್ರಿಕಾದ ಅರಣ್ಯದ ಆನೆ ಮತ್ತು ನಮ್ಮ ಏಷ್ಯಾದ ಆನೆ. ಏಷ್ಯಾದ ಆನೆ ಭಾರತದ ಆನೆ ಎಂತಲೂ ಕರೆಯುವುದುಂಟು. ಭಾರತದ ಆನೆ ಆಫ್ರಿಕನ್ ಆನೆಗಿಂತ ಗಾತ್ರದಲ್ಲಿ ಸಣ್ಣದು. ನಮ್ಮಲ್ಲಿ ಗಂಡಾನೆಗಳಿಗೆ ಮಾತ್ರ ದೊಡ್ಡದಾದ ದಂತಗಳು ಇರುತ್ತವೆ. ಆದರೆ ಆಫ್ರಿಕಾದ ಹೆಣ್ಣು ಆನೆಗಳಿಗೂ ದಂತ ಇರುತ್ತವೆ. ಆದರೆ ಇಂದು ಮನುಷ್ಯ ದಂತಕ್ಕೋಸ್ಕರ ದೈತ್ಯಾಕಾರದ ಆನೆಯನ್ನೇ ಸಾಯಿಸುತ್ತಿದ್ದಾನೆ. ಹೆಣ್ಣಾನೆಗಳು ತಮ್ಮ ಸಂಪೂರ್ಣ ಜೀವನವನ್ನು ಗುಂಪಿನಲ್ಲೇ ಕಳೆಯುತ್ತವೆ. ಗುಂಪಿನಲ್ಲಿ ಅತಿ ಹೆಚ್ಚು ವಯಸ್ಸಾದ ಹೆಣ್ಣಾನೆಯು ಗುಂಪಿನ ನಾಯಕಿಯಾಗಿ ಕಾರ್ಯವಹಿಸುತ್ತದೆ. ಆ ಹೆಣ್ಣಾನೆಗೆ ನೀರು, ಆಹಾರ ಎಲ್ಲವೂ ಸಿಗುವ ಮಾಹಿತಿ ಚೆನ್ನಾಗಿ ತಿಳಿದಿರುತ್ತದೆ. ಗಂಡಾನೆಗಳು ಸಾಮಾನ್ಯವಾಗಿ ಒಂಟಿಯಾಗಿಯೇ ಬಾಳುತ್ತವೆ. ಆನೆಗಳಲ್ಲಿ ತುಂಬಾ ವಿಶೇಷವೆಂದರೆ ಪರಸ್ಪರ ಸಂಪರ್ಕ. ಅವು ಹೇಗೆ ಸಂಪರ್ಕಿಸುತ್ತವೆ ಎಂದು ತಿಳಿದರೆ ಆಶ್ಚರ್ಯವಾಗುತ್ತದೆ. ಕಡಿಮೆ ಆವರ್ತನದ**(frequency)** ಶಬ್ದ ತರಂಗಗಳನ್ನು ನೆಲದ ಮಾರ್ಗವಾಗಿ ಕಳಿಸುವ ಮೂಲಕ ಮತ್ತು ಗ್ರಹಿಸುವ ಮೂಲಕ ಆನೆಗಳು ಪರಸ್ಪರರೊಂದಿಗೆ ಬಲು ದೂರದವರೆಗೆ ಸಂಪರ್ಕ ಸಾಧಿಸುವುವು. ಆನೆಯ ಸೂಕ್ಷ್ಮವಾದ ಪಾದಗಳು ಇಂತಹ ತರಂಗಗಳನ್ನು ತಪ್ಪದೆ ಗ್ರಹಿಸಬಲ್ಲವು. ಅದನ್ನು ಕೇಳಿಸಿಕೊಳ್ಳುವ ಸಂದರ್ಭದಲ್ಲಿ ಗುಂಪಿನ ಪ್ರತಿ ಆನೆಯು ಮುಂಗಾಲುಗಳಲ್ಲಿ ಒಂದನ್ನು ಮೇಲಕ್ಕೆತ್ತಿ ಶಬ್ದ ಬಂದ ದಿಕ್ಕಿಗೆ ತಿರುಗುತ್ತದೆ ಅಥವಾ ಸೊಂಡಿಲನ್ನು ನೆಲಕ್ಕೆ ತಾಗಿಸಿಕೊಳ್ಳುತ್ತದೆ. ಒಂದು ಕಾಲನ್ನು ಮೇಲಕ್ಕೆತ್ತುವುದರಿಂದ ಉಳಿದ ಕಾಲುಗಳಿಗೆ ಗ್ರಹಣಶಕ್ತಿ ಹೆಚ್ಚುವುದೆಂದು ತಿಳಿಯಲಾಗಿದೆ. ನಾವು ಆನೆಗಳನ್ನು ನೋಡಿದಾಗ ಈ ದೃಶ್ಯವನ್ನು ಕೆಲವರು ನೋಡಿರುತ್ತೇವೆ. ಆದರೆ ನಮಗೆ ಅದು ಏಕೆ ಒಂದು ಕಾಲನ್ನು ಎತ್ತುತ್ತಿತ್ತು ಎಂದು ನಮಗೆ ತಿಳಿದಿರಲಿಲ್ಲ.

ಆನೆಯನ್ನು ಸಾಕಬೇಕಾದರೆ ಅವನು ಶ್ರೀಮಂತನೇ ಆಗಿರಬೇಕು ಎಂದು ಪೂರ್ಣಚಂದ್ರ ತೇಜಸ್ವಿಯವರು ಅವರ "ಕೃಷ್ಣೇಗೌಡನ ಆನೆ" ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಯಾಕೆಂದರೆ ಆನೆ ಸೇವಿಸುವ ಆಹಾರವನ್ನು ಪೂರೈಸಲು ತುಂಬಾ ಕಷ್ಟ. ಅದಕ್ಕೆ ಆನೆಗಳಿಗೆ ಕಾಡು ಮಾತ್ರ ಅಗತ್ಯವಾದ ಆಹಾರವನ್ನು ಒದಗಿಸಲು ಸಾಧ್ಯ...

ನಾವು ಚಿಕ್ಕವರಿದ್ದಾಗ “ಆನೆ ಬಂತೊಂದಾನೆ, ಬಿಜಾಪುರದ ಆನೆ, ಇಲ್ಲಿಗೇಕೆ ಬಂತು, ದಾರಿ ತಪ್ಪಿ ಬಂತು” ಎಂದು ನಾವು ಈ ಹಾಡನ್ನು ಹಾಡುತ್ತಿದ್ದೆವು. ಆದರೆ ನಾವು ದೊಡ್ಡವರಾದಾಗ ಈ ಹಾಡಿನ ನಿಜವಾದ ಅರ್ಥ ಗೊತ್ತಾಗುತ್ತಿದೆ. ಅದು ಬಿಜಾಪುರದ ಆನೆ ಅಲ್ಲ. ಅದು ಕಾಡಿನ ಆನೆ. ಅದು ದಾರಿ ತಪ್ಪಿ ಬಂದಿಲ್ಲ. ನಾವು ದಾರಿ

ತಪ್ಪಿಸುತ್ತಿದ್ದೇವೆ ಎಂದು. ನಾವು ದೊಡ್ಡದಾಗಿರುವ ಅರಣ್ಯ ಪ್ರದೇಶಗಳನ್ನು ಚಿಕ್ಕ ಅರಣ್ಯ ಪ್ರದೇಶಗಳಾಗಿ ಛಿದ್ರಗೊಳಿಸುತ್ತಿದ್ದೇವೆ. ಈ ಚಿಕ್ಕ ಅರಣ್ಯ ಪ್ರದೇಶಗಳ ನಡುವೆ ಕೆಲ ಮರಗಳ ಸಾಲು ಸೇತುವೆಯಂತಿರುತ್ತದೆ. ಈ ಮರದ ಸಾಲುಗಳು ಎರಡು ಅರಣ್ಯ ಪ್ರದೇಶಗಳನ್ನು ಕೂಡಿಸುತ್ತವೆ. ಈ ಪ್ರದೇಶವನ್ನು ಕಾರಿಡರ್ ಎಂದು ಕರೆಯುತ್ತಾರೆ. ಈ ಕಾರಿಡರ್ ಮೂಲಕವೇ ಆನೆಗಳು ಒಂದು ಅರಣ್ಯ ಪ್ರದೇಶದಿಂದ ಇನ್ನೊಂದು ಅರಣ್ಯ ಪ್ರದೇಶಕ್ಕೆ ಹೋಗುತ್ತವೆ. ಯಾವಾಗ ಈ ಕಾರಿಡರ್ ಸಮಸ್ಯೆ ಎದುರಾಗುತ್ತದೋ, ಆಗ ಆನೆಗಳು ಕಾಡಿನಂಚಿನಲ್ಲಿರುವ ಹಳ್ಳಿಗಳಿಗೆ ಬರುವ ಸಾಧ್ಯತೆ ಇದೆ. ಆಗ ಮಾತ್ರ ಮಾನವ ಹಾಗೂ ಆನೆಗಳ ಮಧ್ಯೆ ಘರ್ಷಣೆಯುಂಟಾಗುತ್ತದೆ. ಆದ್ದರಿಂದ ಈ ಆನೆಗಳ ಕಾರಿಡರ್ ಮಹತ್ವವನ್ನು ಅರಿತು, ಕಾರಿಡರ್ ಗಳನ್ನು ನಾಶಮಾಡದೆ ಅವುಗಳನ್ನು ಉಳಿಸಿಕೊಳ್ಳೋಣ. ಇದರಿಂದ ಆನೆಗಳ ದಾರಿಯನ್ನು ತಪ್ಪಿಸದೇ ಅವುಗಳ ಪಾಡಿಗೆ ಕಾಡಿನಲ್ಲಿ ವಾಸಿಸಲು ಬಿಡೋಣ.

ಆಗಸ್ಟ್ 12 ವಿಶ್ವ ಆನೆಗಳ ದಿನ. ನಮ್ಮ ಆನೆಗಳ ಬಗ್ಗೆ ತಿಳಿದುಕೊಳ್ಳುವುದು ಒಳಿತು ಅಲ್ಲವೇ. ನಮ್ಮ ಜನಸಮೂಹಕ್ಕೆ, ಮಕ್ಕಳಿಗೆ ಹೆಚ್ಚಾಗಿ ನಮ್ಮ ಕನ್ನಡಿಗರಿಗೆ ಮತ್ತು ಕಾನನ ಓದುಗರಿಗೆ ಕುತೂಹಲ ಮೂಡಿಸುವ ನಮ್ಮ ಆನೆಗಳ ಬದುಕು, ಅವುಗಳ ಆವಾಸ, ಅವುಗಳಿಗೆ ಆಗುತ್ತಿರುವ ತೊಂದರೆಗಳು ಹೆಚ್ಚಾಗಿ ಆನೆಗಳಿಂದ ಮನುಷ್ಯನಿಗೆ ಆಗುತ್ತಿರುವ ಅನುಕೂಲಗಳು ಮತ್ತು ಅವುಗಳ ನಡವಳಿಕೆ ಈ ರೀತಿಯ ಎಲ್ಲವನ್ನು ಕಾನನ ಪತ್ರಿಕೆಗೆ ಕಳಿಸಿಕೊಡಿ, ಹಾಗೆಯೇ, ಜೀವ ವೈವಿಧ್ಯತೆ ಕುರಿತ, ಕಾಡು, ಕಾಡಿನ ಕತೆಗಳು, ಜೀವ ವಿಜ್ಞಾನ, ವನ್ಯ ವಿಜ್ಞಾನ, ಕೀಟಲೋಕ, ಕೃಷಿ, ವನ್ಯಜೀವಿ ಛಾಯಚಿತ್ರಗಳು, ಕವನ (ಪರಿಸರಕ್ಕೆ ಸಂಬಂಧಿಸಿದ), ವರ್ಣಚಿತ್ರಗಳು ಮತ್ತು ಪ್ರವಾಸ ಕತೆಗಳು, ಪರಿಸರಕ್ಕೆ ಸಂಬಂಧಿಸಿದ ಎಲ್ಲಾ ಲೇಖನಗಳನ್ನು ಕಾನನದ ಸೆಪ್ಟೆಂಬರ್ ಸಂಚಿಕೆಗೆ ಆಹ್ವಾನಿಸಲಾಗಿದೆ. ಆಸಕ್ತರು ಇ-ಮೇಲ್ ಅಥವಾ ಪೋಸ್ಟ್ ಮೂಲಕ ಆಗಸ್ಟ್ 28 ರ ಒಳಗೆ ಕಳಿಸಬಹುದು.

ಇ-ಮೇಲ್:

**kaanana.mag@gmail.com**

ಪೋಸ್ಟ್:

**Study House,**
ಕಾಳೇಶ್ವರಿ ಗ್ರಾಮ,
ರಾಗಿಹಳ್ಳಿ ಅಂಚೆ,
ಜಿಗಣಿ ಹೋಬಳಿ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.




- ಅಶ್ವಿನಿ ಎಸ್.

ಬೆಂಗಳೂರು.